# ಶೂರ್ಪಾಲಿಯ ಆಚಾರ್ಯರು



ಬರೆದವರು

ಟ್ಟಿ ಶೇಷಾಚಾರ್ಯರು, ಬಿ.ಎ. ಎಲ್‌ಎಲ್.ಬಿ.

ಬೆಳಗಾವಿ.

೧೯೪೧ ಬೆಲೆ ೨-೧೨-೦

# ಶೂರ್ಪಾಲಿಯ ಆಚಾರ್ಯರು

ತಪ್ಪು ಸಾಸಿರವಿರಲು ವುಳಿದೊಂದು ಗುಣಬರೆ ।
ಯೊಪ್ಪಿಕೊಂಬುದು ಬಲ್ಲವರು ॥
ಕಪ್ಪು ಕಿಂಚಿತ್ತಿರೆ ಕಳೆದಿನಿದಮೃತವ ।
ಚಪ್ಪರಿದೀಂಟದಿರ್ದಪರೆ ॥

ಕನಕದಾಸರು.

ನೂರಾರು ದೋಷಗಳನ್ನೊಳಗೊಂಡುದಾದರೂ ಗ್ರಂಥವು
ಮನೋರಂಜಕವಾಗಿರಬಹುದು. ಒಂನಾದರು
ದೋಷವಿಲ್ಲದಿದ್ದರೂ ಗ್ರಂಥವು
ನೀರಸವಾಗಿರಬಹುದು.

ಗೋಲ್ಡ್‌ಸ್ಮಿಥ್

ಬರೆದವರು,
**ಕಟ್ಟಿ ಶೇಷಾಚಾರ್ಯರು**, ಬಿ.ಎ.ಎಲ್‌ಎಲ್.ಬಿ.
**ಬೆಳಗಾವಿ.**

1941



[ ಬೆಲೆ ೦—೧೨—೦

# ಪರಿವಿಡಿ

# ಅರಿಕೆ

ಆಂಗ್ಲ ಭಾಷೆಯಲ್ಲಿ ಗೋಲ್ಡ್‌ಸ್ಮಿತ್ತನೆಂಬ ಕವಿಯು 'ದಿ ವಿಕಾರ ಆಫ್ ವೇಕಫೀಲ್ಡ' ಎಂಬ ಸಾಮಾಜಿಕ ಆಖ್ಯಾಯಿಕೆಯನ್ನು ಬರೆದಿರುವನು. ಅನೇಕ ಪಾಶ್ಚಾತ್ಯನುಡಿಗಳಲ್ಲಿ ಅದರ ಅನುವಾದವಾಗಿರುವುದೆಂದು ತಿಳಿಯುತ್ತದೆ. ಅದೇ ಮಾದರಿಯನ್ನನುಸರಿಸಿ ಮರಾಠಿಯಲ್ಲಿ ಮಹಾರಾಷ್ಟ್ರೀಯಸಂಸ್ಕೃತಿಪದ್ಧತಿಗಳಿಗೆ ಸರಿಪಡುವಂತೆ 'ವಾಯೀಕರ ಭಟಜೀ' ಎಂಬ ಕಾದಂಬರಿಯು ರಚಿತವಾಗಿದೆ. ಆ ಎರಡೂ ಗ್ರಂಥಗಳನ್ನವಲೋಕಿಸಿ ನಮ್ಮ ನಾಡು ನಡೆ ನುಡಿಗಳಿಗೆ ಅಳವಡುವಂತೆ ಸ್ವತಂತ್ರವಾದ ಹೊತ್ತಿಗೆಯೊಂದನ್ನು ಕನ್ನಡಿಗರಿಗಾಗಿ ಒದಗಿಸಿಕೊಡಬೇಕೆಂದು ಈ ಗ್ರಂಥವನ್ನು ಬರೆಯಲಾಯಿತು. ಇದು ಯಾರನ್ನೂ ಹೀಯಾಳಿಸಲು ಹೊರಟುದಲ್ಲ. ಗ್ರಾಮ ನಾಮ ವ್ಯಕ್ತಿ ಇವುಗಳ ಸಾದೃಶ್ಯದಿಂದ, ಕಾಕತಾಳೀಯವಾಗಿ ಯಾರಾದರು ಬೊಟ್ಟು ತೋರಿಸುವಂತೆ ಪಿಂಗಡವಾಗಿ ನಿಂತುದಾದರೆ ಆ ವಿಷಯ ನನಗೆ ಅಪರಿಚಿತವೆಂದು ತಿಳಿಯತಕ್ಕದು! ಅಂತಹರಲ್ಲಿ ಕ್ಷಮೆಯ ಯಾಚನೆ.

ಈ ಗ್ರಂಥವು ಗತಿಸಿದ ನನ್ನ ಪತ್ನಿಯರು ಗಂ. ಸುಂದರಾಬಾಯಿ ದಂಪತಿ ಸೌ. ಲಕ್ಷ್ಮೀಬಾಯಿ ಇವರೀರ್ವರ ನೆನಪಿಗಾಗಿ ಮುಡಿಪಾಗಿದೆ.

ಪ್ರೊಫೆಸರ ಆರ್. ವ್ಹಿ. ಜಹಾಗೀರದಾರ ಎಂ. ಎ. (ಲಂಡನ್) ಅವರು ನನಗಾಗಿ ತಮ್ಮ ವೇಳೆಯನ್ನು ವೆಚ್ಚಮಾಡಿ ಮುನ್ನುಡಿ ಬರೆದು ಕಳುಹಿದುದಕ್ಕಾಗಿ ಅವರಿಗೆ ತುಂಬ ಋಣಿಯಾಗಿರುವೆನು. ನನ್ನ ಹಿತೈಷಿಗಳಾದ ಶ್ರೀ. ಬ್ರಿಜನಾಳ ಶ್ರೀನಿವಾಸರಾಯರು ಎಂ. ಎ. (ಧಾರವಾಡ) ಮತ್ತು ಶ್ರೀ. ಕುಲಕರ್ಣಿ ಭೀಮರಾಯರು ಬಿ. ಎ. ಎಲ್‌ಎಲ್. ಬಿ. (ಬೆಳಗಾವಿ) ಇವರು ಹೊತ್ತಿಗೆಯ ವಿಷಯದಲ್ಲಿ ಸಲಹೆಕೊಟ್ಟುದರಿಂದ ಅವರಿಗೆ ನನ್ನ ಕೃತಜ್ಞತೆಗಳು. ಶ್ರೀಮಹಾವೀರ ಮುದ್ರಣಾಲಯದ ಒಡೆಯರೂ ನನ್ನ ವ್ಯವಸಾಯಬಂಧುಗಳೂ ಆದ ಚೌಗುಲೆ ಭೀಮರಾಯರು ಬಿ. ಎ. ಎಲ್‌ಎಲ್. ಬಿ. ಅವರು ಪುಸ್ತಕವು ಶೀಘ್ರವಾಗಿ ಸಿದ್ಧವಾಗುವಂತೆ ಸೌಕರ್ಯಗಳನ್ನು ಒದಗಿಸಿಕೊಟ್ಟುದುದಕ್ಕಾಗಿ ಅವರ ಉಪಕಾರವನ್ನೂ ಮರೆಯಲಾರೆನು.

**ಬೆಳಗಾವಿ**
೨೨-೯-೧೯೪೧ }

**ಕಟ್ಟಿ ಶೇಷಾಚಾರ್ಯ**

# ಮುನ್ನುಡಿ

ಕಾದಂಬರಿಯ ಹೆಸರು 'ಶೂರ್ಪಾಲಿಯ ಆಚಾರ್ಯರು'; ಕಾದಂಬರೀಕಾರರ ಹೆಸರು 'ಕಟ್ಟಿ ಶೇಷಾಚಾರ್ಯರು'; ಈಗ ಮುನ್ನುಡಿಯನ್ನು ಬರೆವವರು 'ಆದ್ಯ ಆಚಾರ್ಯರು'. ಈ ಯೋಗಾಯೋಗವನ್ನು ನೋಡಿದ ಕೂಡಲೆ ಇದೇನೊ ಆಚಾರ್ಯತನದ ಪರಂಪರಾಪ್ರಚಾರದ ಗ್ರಂಥವೆಂದು ಯಾರಿಗಾದರೂ ಹೊಳೆದರೆ ನನಗೆ ಆಶ್ಚರ್ಯವೆನಿಸದು. ಇಂದು ಕರ್ನಾಟಕದ ಪರಿಸ್ಥಿತಿಯು ಹಾಗಿದೆ, ಕನ್ನಡಿಗರ ಮನಃಸ್ಥಿತಿಯು ಹಾಗೆಯೆ; ವ್ಯವಹಾರವನ್ನಾಗಲಿ ವ್ಯಕ್ತಿಯನ್ನಾಗಲಿ ಇದಿರಿಸಿದ ಮಾತ್ರಕ್ಕೆ ಹೆಣ್ಣಿನ ತಂದೆಯಂತೆ 'ಜಾತಿ ಯಾವುದು?' ಎಂದೇ ನಾವು ಪ್ರಶ್ನಾವಳಿಯನ್ನು ಪ್ರಾರಂಭಿಸುವೆವು. ಸಾವಿರಾರು ವರುಷಗಳ ಹಿಂದೆ ಸಮಾಜದ ಸಾಮಾಜಿಕ ಜೀವನ ಸ್ಥಿರಗೊಳ್ಳಲು ಸಹಾಯಕವಾಗಿರಬಹುದಾದ ಜಾತಿಪದ್ಧತಿಯು ಇಂದು ನಮ್ಮ ಸಮಾಜಬಂಧನವನ್ನು ಸಡಿಲಿಸುವ ಸಾಧನವಾಗಿದೆ!

ಈ ಮಾತಿನ ಮರ್ಮದ ದೃಷ್ಟಾಂತ ಈ ಕಾದಂಬರಿ ಎಂದು ನನ್ನ ಅಭಿಪ್ರಾಯ. ಪ್ರಗತಿಯು ಕಾಲದ ನಿಸರ್ಗಗುಣವಾದುದನ್ನು ನಾವು ಮರೆತುದು ಹೇಗೆ, ಹಿಂದಿನಿಂದ ಒಂದು ಶಕ್ತಿಯು ನಮ್ಮನ್ನು ಮುಂದೆ ನೂಕುತ್ತಿರುವಾಗಲೂ ನಾವು ಹೆದರಿಕೆಯಿಂದ ಹಿಂತಿರುಗಿಯೆ ಆಧಾರಕ್ಕಾಗಿ ಕೈಚಾಚುತ್ತಿರುವುದು ಹೇಗೆ, ಸುತ್ತಲು ನಡೆಯುತ್ತಿರುವ ವ್ಯವಹಾರದ ರೀತಿಯನ್ನು ಅರಿಯದ ನಮ್ಮ ಅಜ್ಞಾನವೆಂತಹದು, 'ಗಂಗೆಯಲಿ ಮುಳುಗಿದರು ಚೆಂಬು ಮೇಲಿನ ಚಿಂತೆ' ಎಂಬ ನಮ್ಮ ಜೀವನಮೋಸವೆಂತಹದು— ಇಂತಹ ಅನೇಕ ಸಮಸ್ಯೆಗಳು ಸುಲಭವಾಗಿ, ಸಮರ್ಪಕವಾಗಿ, ಮನೋರಂಜಕವಾಗಿ ಇಲ್ಲಿ ಬಿಡಿಸಲ್ಪಟ್ಟವೆ ಎಂದೂ ನಮ್ಮ ಅಭಿಪ್ರಾಯ.

ಕತೆ– ಪಾತ್ರ– ಅವುಗಳ ದೇಶಕಾಲ ಈ ದೃಷ್ಟಿಯಿಂದ ಕಾದಂಬರಿ ಸಾಮಾಜಿಕವೆನಿಸಬಹುದು. ಆದರೆ ಈ ಕಾದಂಬರಿಯ ನಿಜವಾದ ಮಹತ್ವವು ಐತಿಹಾಸಿಕ ಸ್ವರೂಪದ್ದಾಗಿದೆ. ಬ್ರಿಟಿಶರ ಆಳಿಕೆ–ಆಡಳಿತ, ಶಿಕ್ಷಣ–ಸಂಸ್ಕಾರ ಇವುಗಳ ಸಂಬಂಧ ಬಂದಂದಿನಿಂದ ನಮ್ಮ ದೇಶದಲ್ಲಿ ಒಂದು ಕ್ರಾಂತಿ ಮಾಡಿತು. ರಾಜಕೀಯ ಕ್ರಾಂತಿಗಿಂತಲೂ ಮಹತ್ವದ್ದಾದ ಕ್ರಾಂತಿ ಇದು; ಯಾಕೆಂದರೆ ಇದು ಜೀವನಕ್ರಾಂತಿ; ನಮ್ಮ ಇಡಿಯ ಜೀವನ ರೀತಿನೀತಿಗಳೆ ಸಪ್ಪಳಿಲ್ಲದಂತೆ, ಆದರೂ ಸಂತತವಾಗಿ ಹೊಸ ಧೋರಣೆಯನ್ನನುಸರಿಸಿದುವು. ಹಲವು ವರ್ಷಗಳ ತರುವಾಯ ಈ ಹೊಸತನವು ಕಣ್ಣೊತ್ತುವಂತೆ ಕಾಣತೊಡಗಿತು. ಆಗ ಪ್ರಾರಂಭವಾಯಿತು ಬುದ್ಧಿ ಭಾವನೆಗಳಲ್ಲಿ ಕ್ರಾಂತಿ.

ಒಂದು ದೃಷ್ಟಿಯಿಂದ ಕಾದಂಬರಿಯ ಅಧ್ಯಾಯಗಳಿಗೆ ಕೊಟ್ಟ ಹೆಸರುಗಳು ಸಾರ್ಥಕವಾಗಿವೆ. ಮಹಾಭಾರತಕ್ಕೆ ಸಂಬಂಧಿಸಿದ ಆ ಹೆಸರು ಇಂದಿನ ಜೀವನಮಹಾಭಾರತದ ದ್ಯೋತಕವಾಗಿವೆ. ಸಂಪ್ರದಾಯದಿಂದ ರೂಢರಾದ ಕೌರವರು ಹೊಸತಾದ ರೀತಿನೀತಿಗಳಿಂದ ನಡೆವ ಪಾಂಡವರೊಡನೆ ಹೋರಾಡಿದ್ದು ಮಹಾಭಾರತದ ಮರ್ಮ. ಮಹಾಭಾರತದಲ್ಲಿಯ ಕುರುಕ್ಷೇತ್ರಕ್ಕೆ ಕಾದಂಬರಿಯ ಕತೆಯನ್ನು ಹೇಳುವ ನರಸಿಂಹಾಚಾರ್ಯರು ಸಾಂಕೇತಿಕರಾಗಿದ್ದಾರೆ. ಕುರುಕ್ಷೇತ್ರದಲ್ಲಿ ಹಳೆದು ಅಳಿದು ಹೊಸತು ಮೂಡಿದಂತೆ ನರಸಿಂಹಾಚಾರ್ಯರಲ್ಲಿ ಹಳೆದು ಹಿಂದೆ ಬೀಳುತ್ತ ಹೊಸತು ಅವರ ಮಕ್ಕಳ ರೂಪದಿಂದ ತಲೆ ಎತ್ತುವುದು.

ಕಾದಂಬರಿಯಲ್ಲಿ ಜೀವನಚಿತ್ರವು ಸೊಗಸಾಗಿದೆ. ಬುದ್ಧಿಯ ಆಲಸ್ಯಕ್ಕಾಗಿಯೊ ಭಾವನೆಯ ಆವೇಗಕ್ಕಾಗಿಯೊ ಸಂಪ್ರದಾಯಕ್ಕೆ ಅಂಟಿಕೊಳ್ಳುವ, ನಿರ್ಮಲಾಂತಃಕರಣದ ನರಸಿಂಹಾಚಾರ್ಯರು ಕೆಲಕಾಲದ ಮುಂಚಿನ ಬ್ರಾಹ್ಮಣರ ತದ್ರೂಪ ಮಾದರಿಯಾಗಿದ್ದಾರೆ. ಅವರ ನಡೆ ನುಡಿಗಳ ಕಲ್ಪನೆಗೆ ಕಾದಂಬರಿಯ ಪ್ರಾರಂಭದ ಭಾಷಾ

ಪ್ರೌಢಿಯ ಸಾಕ್ಷ್ಯವಾಗಿದೆ. ಆಚಾರ್ಯರ ಜೀವನವು ಅವರ ಭಾಷೆಯಂತೆ ಉತ್ತುಂಗಗೀರ್ವಾಣಗಿರಿಶಿಖರಗಳಲ್ಲಿ ಉಗಮ ಹೊಂದಿ ಕ್ರಮೇಣ ಕನ್ನಡದ ತಿಳಿತಪ್ಪಲುಭೂಮಿಯಲ್ಲಿ ಪ್ರಸಾದದಿಂದ ಹರಿಯುವುದು. 'ನನ್ನ ಮಾತಿನಲ್ಲಿ ಇಷ್ಟು ದಿವಸ ಸಂಸ್ಕೃತದಲ್ಲಿ ಕನ್ನಡವನ್ನು ಬೆರೆಸುವ ಪರಿಪಾಠವಿದ್ದಿತು. ಈಗ ಕನ್ನಡದಲ್ಲಿ ಸಂಸ್ಕೃತ ಬೆರೆಸುವೆನು' ಎಂಬ ಮಾತಿನಲ್ಲಿ ಇಡಿಯ ಕಾದಂಬರಿಯ ತಿರುಳಿದೆ.

ಜೀವನದ ಚಿತ್ರವಾಗಿದ್ದಂತೆ ಸಾಹಿತ್ಯಕ್ಕೆ ಒಂದು ನವ್ಯೋನವವಾಗಿದೆ ಈ ಕಾದಂಬರಿ. ಇಂಗ್ಲಿಶದಲ್ಲಿ Oliver Goldsmith ಎಂಬವನ The Vicar of Wakefield ಎಂಬ ಕಾದಂಬರಿಯ ಅನುವಾದವಿದು ಎಂದು ಗ್ರಂಥಕರ್ತರು ಹೇಳುವಾಗ ಇಂಗ್ಲಿಶ ಮಾದರಿ ನಿಮಿತ್ತಮಾತ್ರವಾಗಿದೆ ಎಂದೇ ವಾಚಕರು ಅಭಿಪ್ರಾಯಪಡಬಹುದು. ಪಾತ್ರ-ಸಂನಿವೇಶ-ರೀತಿನೀತಿ ಇವೆಲ್ಲವೂ ಕರ್ನಾಟಕಕ್ಕೆ ಸಂಬಂಧಿಸಿವೆ; ಮೊದಲಿನಿಂದ ಕೊನೆಯವರೆಗೂ ಮಿನುಗುತ್ತಿರುವ ಹಾಸ್ಯವೂ ಕನ್ನಡಿಗರ ಜೀವನ ವೈಶಿಷ್ಟ್ಯದ ಮಾದರಿಯೆ ಆಗಿದೆ. 'ಶೂರ್ಪಾಲಿಯ ಆಚಾರ್ಯರು' ಭಾರತೀಯ ಸಂಸ್ಕೃತಿಯ ಆಧುನಿಕ ಇತಿಹಾಸವಾಗಿದೆ; ಆಧುನಿಕ ಪದ್ಧತಿಯಲ್ಲಿ ಬರೆದ ಇತಿಹಾಸವೂ ಆಗಿದೆ, ಯಾಕೆಂದರೆ ಇದರಲ್ಲಿ ಗ್ರಂಥಕರ್ತರು ಹಣಿಕಿಕ್ಕಿ ನೋಡಿಲ್ಲ, ಪ್ರಚಾರಕ್ಕೆ ಪ್ರಯತ್ನಿಸಿಲ್ಲ.

ಧಾರವಾಡ<br>೨೨—೯—೧೯೪೧ } ಶ್ರೀರಂಗ

ಶಾರದಾ ಪ್ರೆಸ್ ಬೆಳಗಾಂವ



ವೈ. ಸೌ. ಲಕ್ಷ್ಮೀಬಾಯಿ ಕಟ್ಟಿ

# ಆದಿಪರ್ವ

ನಮ್ಮೂರು ಶೂರ್ಪಾಲಿ. ಶೂರ್ಪಾಲಿಯಲ್ಲಿ ಅಶ್ವತ್ಥನರಸಿಂಹನು ಪ್ರತ್ಯಕ್ಷವಾಗಿ ನೆಲೆನಿಂತಿರುವನು. ನರಸಿಂಹನ ದೇವಸ್ಥಾನವು ಕೃಷ್ಣಾ ನದಿಯ ತಟಾಕದಲ್ಲಿ ಶೋಭಿಸುತ್ತಿರುವುದು. ತವರೂರಿಂದ ಹೊರಟ ಕೃಷ್ಣವೇಣಿಯು ಗುಡಿಯ ಅಡಿಗೆರಗಿ ರಮಣ ರತ್ನಾಕರನೆಡೆಗೆ ರಭಸ ದಿಂದ ಹರಿದು ಹೋಗುವಳು. ವರ್ಷಾಕಾಲದಲ್ಲಿ ನರಸಿಂಹನಿಗೆ ಪ್ರದ ಕ್ಷಿಣೆ ಹಾಕುವುದು ಅವಳ ಸಂಪ್ರದಾಯ. ಆಗ ಕಲ್ಪಾಂತದ ಕಲ್ಪನೆಯು ತಲೆದೋರುವುದು. ಪ್ರಳಯದಲ್ಲಿ ಲಕ್ಷ್ಮೀನಾರಾಯಣನು ವಟಪತ್ರ ತಲ್ಪವನ್ನಾಶ್ರಯಿಸಿ ತೇಲುತ್ತಿರುವಾಗ ಸಕಲ ಜೀವರಾಶಿಗಳನ್ನು ತನ್ನ ಮಹೋದರದಲ್ಲಿರಿಸಿ ಅಭಯವನ್ನೀಯುವಂತೆ, ನೆರೆಯ ಹಾವಳಿಯಲ್ಲಿ ಶೂರ್ಪಾಲಿಯ ನರಕಂಠೀರವನು ಅಶ್ವತ್ಥವೃಕ್ಷವನ್ನಾಶ್ರಯಿಸಿ ಪಂಚ ಕ್ರೋಶಿಯೊಳಗಿನ ಸಕಲ ಚರಾಚರವಸ್ತುಗಳಿಗೆ ಧೃತಿಗೊಡುವನು. ದೇವಸ್ಥಾನವು ಗೋಡೆ, ಅಳ್ವೇರಿ, ಕೊತ್ತಳಗಳೊಂದಿಗೆ ಜಲಕೋಟೆ ಯಾಗಿ ಪರಿಣಮಿಸುವುದು. ಕೋಟೆಯೊಳಗಿನ ಡೆಂಕಣಿಯು ಗುಡಿಯನ್ನೆತ್ತಿ ಅರಸನ ಅಧಿಷ್ಠಾನವನ್ನು ಸಾರುವಂತೆ ಅರಳಿಯ ಮರವು ತಲೆಯನ್ನು ಗಗನಕ್ಕೆತ್ತಿ ಕೈ ಚಾಚಿ ನರಹರಿರಾಯನು ಜಾಗೃತನಾಗಿರುವನೆಂದು ತಳಿರುಬೊಟ್ಟುಗಳಿಂದ ತೋರಿಸುವುದು.

ದೇವಾಲಯದ ಮಹಾದ್ವಾರದ ಇಕ್ಕೆಲದಲ್ಲಿ ಬಿದಿರ ಮೆಳೆಗಳು ಪಡಿ ವಳರಂತೆ ಬೆತ್ತವನ್ನೆತ್ತಿ ನಿಂತಿರುವುವು. ಸುತ್ತಣ ವನವು ಜಾಲಿ ಬೇವು ಹುಣಸೆ ಮುಂತಾದ ಮರಗಳಿಂದ ಅಂದವಾಗಿ ಕಂಗೊಳಿಸುವುದು. ಈ ವೃಕ್ಷವಾಟಿಕೆಯು ಶೂರ್ಪಾಲಿಯವರ ಸದ್ಗುಣಗಳ ಪ್ರತೀಕವಾಗಿದೆ. ಹೆಜ್ಜೆಯು ದೃಷ್ಟಿಪೂತವಾಗಿರಬೇಕೆಂದು ಜಾಲಿಯ ಮುಳ್ಳು ಚುಚ್ಚಿ

ಜಾಗರೂಕತೆಯನ್ನು ಸೂಚಿಸುವುದು. ಮೊದಲು ಕಹಿಯಾಗಿ ಕಂಡರೂ ಪರಿಣಾಮವು ಪಥ್ಯಕರವೆಂದು ಬೇವು ಸಾತ್ವಿಕತೆಯ ಗುಟ್ಟನ್ನು ಸಾರು ವುದು. ಮರ ಮುಪ್ಪಾದರು ಹುಳಿಗೆ ಮುಪ್ಪಿಲ್ಲವೆಂದು ಹುಣಸೆಯು ಹೇಳುವುದು. ಕುಟುಂಬವು ಬಡವಾಗಿದ್ದರು ನೇರವಾಗಿ ನಿಲ್ಲುವುದೆಂದು ಊರ ವಂಶವು ದನಿಗೈಯುವುದು.

ನರಸಿಂಹಸ್ವಾಮಿಯು ಭಕ್ತವತ್ಸಲನು, ಅನುಗ್ರಹಶಾಲಿಯು. ಅವನನ್ನುದ್ದೇಶಿಸಿ ಅನೇಕ ಜನ ಭಕ್ತರು ವ್ರತೋಪವಾಸಗಳನ್ನು ಕೈಕೊಂಡು ಅನುಗ್ರಹ ಪಡೆಯುವರು. ಪರಮ ದಯಾಳುವಾದ ನರಹ ರಿಯು, ಹಣವಿಲ್ಲದವರಿಗೆ ಧನ, ಮಗುವಿಲ್ಲದವರಿಗೆ ಸಂತತಿ, ವ್ಯಾಧಿ ಗ್ರಸ್ತರಿಗೆ ಆರೋಗ್ಯ ಇವುಗಳನ್ನು ದಯಪಾಲಿಸುವನು. ಸತಿ ತೊರೆದ ಪತಿಗೆ, ಪತಿ ಬಿಟ್ಟ ಸತಿಗೆ, ಪರೀಕ್ಷೆಗಳಿಂದ ಪರಿತಾಪಬಡುವ ಅಂತೇ ವಾಸಿಗಳಿಗೆ, ವ್ಯಾಜ್ಯದ ಚಿಂತೆಯಲ್ಲಿ ಒದ್ದ ಪಕ್ಷಕಾರರಿಗೆ ಭಕ್ತಾಧೀನ ನಾದ ನರಸಿಂಹನು ಅವರವರ ಮನೋಭೀಷ್ಟವನ್ನು ಅವರವರ ಗುಣ ಕರ್ಮಾನುಸಾರವಾಗಿ ಪೂರೈಸುವನು. ಕೃತಜ್ಞರಾದ ಭಕ್ತರು ಶೂರ್ಪಾ ಲಿಗೆ ಬಂದು ನರಸಿಂಹನಿಗೆ ನೈವೇದ್ಯ ತೋರಿಸಿ ಹರಕೆ ಮುಟ್ಟಿಸುವರು.

ವರ್ಷಕ್ಕೊಮ್ಮೆ ವೈಶಾಖ ಹುಣ್ಣಿವೆಗೆ ನರಸಿಂಹನ ರಥೋತ್ಸವ ವಾಗುವುದು. ಅದುವೆ ಶೂರ್ಪಾಲಿಯ ಆಗಿಯ ಜಾತ್ರೆ. ಆಗ ಸುತ್ತಣ ಪ್ರದೇಶದಿಂದ ಸಾವಿರಾರು ಜನರು ಕಲೆಯುವರು. ನವರಾತ್ರೆಯಲ್ಲಿ ನರಸಿಂಹನ ವಾಹನವು ವಾದ್ಯವೈಭವದೊಂದಿಗೆ ವಿಜೃಂಭಣೆಯಿಂದ ಹೊರಡುವುದು. ನದಿಯ ಬೀದಿಯ ಎಡಬಲದಲ್ಲಿ ಗೂಡಾರದ ಅಂಗಡಿ ಗಳು ಅಂದವಾಗಿ ತೋರುವುವು. ಕೊನೆಗೆ ಗುಡಿಗೆ ಕಳಸವನ್ನಿಟ್ಟಂತೆ ಕೃಷ್ಣಪಾರಿಜಾತದ ಬಯಲಾಟವಾಗದಿದ್ದರೆ ಜಾತ್ರೆಯು ಸಾಂಗವಾಗಿ ಮುಗಿಯಿತೆಂದು ಅನಿಸುವುದಿಲ್ಲ.

ನವರಾತ್ರೆಯಲ್ಲಿ ನರಸಿಂಹನೇ ಭಕ್ತರಿಗೆ ನೈವೇದ್ಯ ಕೊಡುವನು. ಅದನ್ನು ಆಕಂಠ ಪರಿಗ್ರಹಿಸಿ ವಿಪ್ರವೃಂದವು ಪಾವನವಾಗುವುದು. ನರಸಿಂಹನ ಪರಮ ಪವಿತ್ರವಾದ ಪರಮಾನ್ನವನ್ನು " ಶೂರ್ಪಾಲಿಯ

ಗೋದಿಯ ಹುಗ್ಗಿ " ಎಂದು ಹೀಯಾಳಿಸಿ ಮೂಗು ಮುರಿಯುವ ಕೆಲ ಪಾಪಿಷ್ಟರುಂಟು. ಅಂತಹರಿಗೆ ಆಗಿಯ ಜಾತ್ರೆಗೆ ಅಗ್ರಹದ ಔತಣ! ಪರಿಪಾಕ ಹೊಂದಿದ ಆ ಪರಮಾನ್ನದ ಪರಿಮಳವು ಒಮ್ಮೆ ನಾಸಿಕದ ನಾಳವನ್ನು ಪ್ರವೇಶಿಸಿತೆಂದರೆ ಮಿಕ್ಕ ಪಕ್ವಾನ್ನಗಳ ಪರವೆಯೆ ಹರಿದು ಹೋಗುವುದು. ನರಸಿಂಹನ ನೈವೇದ್ಯ ಬೇರೆಯಲ್ಲ, ಸಾಕ್ಷಾದಮೃತ ಬೇರೆಯಲ್ಲ! ಆ ಪಾಯಸವನ್ನು ಸೇವಿಸುವ ಪ್ರಾಣಿಯ ಆಧಿವ್ಯಾಧಿ ಗಳು ಅಳಿದು ಹೋಗುವುವಲ್ಲದೆ ಭವರೋಗವೂ ಬಯಲಾಗುವುದು!

ಶೂರ್ಪಾಲಿ ಸಡಗರದ ಅಗ್ರಹಾರ. ಪ್ರಸ್ತಪ್ರಯೋಜನಗಳಾದರೆ ಇನ್ನೂರು ಇನ್ನೂರ ಐವತ್ತು ಎಲೆಗಳು ಬೀಳುವುವು. ಸ್ಪೃಶ್ಯಾ ಸ್ಪೃಶ್ಯತೆಯ ವಿವೇಕಕ್ಕೆ ಕಡುಹಗೆಯಾದ ಉಗೆಬಂಡೆಯು ದೂರದಲ್ಲಿ ರುವುದರಿಂದ ಶೂರ್ಪಾಲಿಯಲ್ಲಿ ಸನಾತನ ಧರ್ಮವು ಮುಕ್ಕಾಗದೆ ಉಳಿದಿರುವುದು. ಮೋಟರವು ಒಮ್ಮೊಮ್ಮೆ ಮೋರೆ ತೋರಿಸಿದರೂ ಪಾದಚಾರಿಯಾಗಿ, ಕುದುರೆಯ ಮೇಲೇರಿ, ಬಂಡಿಯಲ್ಲಿ ಕುಳಿತು, ಪ್ರವಾಸ ಮಾಡುವುದು ಅಖಂಡವಾಗಿ ನಡೆದಿದೆ.

ಶೂರ್ಪಾಲಿಯ ಸಮಾಜದಲ್ಲಿ ಸಾಮ್ಯ ಹೆಚ್ಚು; ವೈಷಮ್ಯ ಕಡಿಮೆ. ಆದುದರಿಂದ ಅಲ್ಲಿ ಈರ್ಷೆ ಅಸೂಯೆಗಳಿಗೆ ಆಸ್ಪದವಿಲ್ಲವೆಂದರೂ ಸಲ್ಲು ವುದು. ಅತಿದರಿದ್ರ ಅತಿಸಿರಿವಂತರಿಗೆ ಊರಲ್ಲಿ ಸ್ಥಾನವಿಲ್ಲ. ಏಕೆಂದರೆ, ಬಡವರಿಗೆ ಹೊಟ್ಟೆದುಂಬಿಕೊಳ್ಳುವ ಸಾಧನವಿಲ್ಲ; ಸಿರಿವಂತರಿಗೆ ಸುಖ ಬಡುವ ಸಲಕರಣಗಳಿಲ್ಲ. ವ್ಯವಸಾಯಸಾಮ್ಯಕ್ಕೆ ಶಾನಭೋಗರ ಮನೆತನ ಅಪವಾದ. ಮತಸಾಧರ್ಮ್ಯಕ್ಕೆ ಶಾಂಕರಮತಾನುವರ್ತಿ ಮಠ ಅಪವಾದ. ಆದರೂ ಈ ಅಪವಾದಗಳು ಸಾಮ್ಯವನ್ನೇ ಸಿದ್ಧ ಗೊಳಿಸುವುವು. ಎಲ್ಲರು ನಾಮಾಂಕಿತಾಚಾರಸಂಪನ್ನರು. ಹೊಗೆಸೊಪ್ಪಿನ ಹೊಲ್ಲದ ತ್ರಿವಿಧ ಚಟ ಅವರಲ್ಲಿಲ್ಲವೆಂದೇ ಹೇಳ ಬಹುದು. ನಸ್ಯ ಕೊಂಡು ಏರಿಸುವ ಚಟ ಕಡಿಮೆ. ಸಂಚಿಯನ್ನಿಡುವ ಚಟ ಅದಕ್ಕೂ ಕಡಿಮೆ. ತಂಬಾಕು ತೋರುವಂತೆ ಸೇದುವ ಚಟ ತೀರ ಕಡಿಮೆ. ಹೊಂಡದ ನೀರಿನಂತೆ ಶೂರ್ಪಾಲಿಯ ಭೂಸುರಸಮಾ ಜವು ಗಂಭೀರವಾಗಿ ನೆಲಸಿಕೊಂಡಿದೆ!

ಶೂರ್ಪಾಲಿಯಲ್ಲಿ ನಿತ್ಯಕರ್ಮಗಳೊಳಗೆ ಆಲಸಿಕೆಯಿಲ್ಲ. ಸ್ನಾನ ಸಂಧ್ಯಾವಂದನೆ ಪೂಜೆ ನೈವೇದ್ಯ ವೈಶ್ವದೇವ ಬಲಿಹರಣಗಳು ಲೋಪವಿಲ್ಲದೆ ಸಾಗಿರುವುವು. ಪ್ರಶಸ್ತವಾಗಿ ಮಡಿಮೈಲಿಗೆಗಳನ್ನಾಚರಿಸಬೇಕಾದರೆ ಶೂರ್ಪಾಲಿಯು ಕ್ಷೇತ್ರವನ್ನಾಶ್ರಯಿಸತಕ್ಕುದು. ಕೃಷ್ಣಾಂಬೆಯ ಪಯಸ್ಸನ್ನುಳಿದು ಬೇರೆ ಖನಿಜ ನೀರಿನ ಹನಿಯನ್ನೂ ಮುಟ್ಟಕೂಡದೆಂಬ ಪರಂಪರೆಯನ್ನು ಊರವರು ಇಂದಿಗೂ ದಕ್ಷತೆಯಿಂದ ಕಾಯ್ದುಕೊಂಡಿರುವರು. ಊರಲ್ಲಿ ಬಾವಿಯಿಲ್ಲ, ಕೆರೆಯಿಲ್ಲ. ಈ ಸನಾತನ ಸಂಪ್ರದಾಯದಲ್ಲಿ ಸರಕಾರದವರೂ ಸಹಕರಿಸಿದುದು ಸುದೈವದ ಸಂಗತಿ! ಶೂರ್ಪಾಲಿಯಲ್ಲಿ ನೀರಿನ ಆರವಿಲ್ಲ; ನಾರಿನ ರೋಗವಿಲ್ಲ.

ನಿತ್ಯಕರ್ಮಗಳಲ್ಲಿ ಸಂಧ್ಯಾದಿಗಳಿಗೆ ಲೋಪವೊದಗಿದರೂ ಆರುಣಾರಾಧನೆ ನಿಲ್ಲತಕ್ಕುದಲ್ಲ. ನೀರಿನ ಕೆಲಸ ನಿಂತರೆ ನೈವೇದ್ಯವೆ ನಿಂತು ಹೋಗುವುದು. ಆದುದರಿಂದ ಶೂರ್ಪಾಲಿಯಲ್ಲಿ ನಿತ್ಯ ನೀರುದುಂಬುವ ಹಬ್ಬ. ಮನೆಗೊಂದು ಮುಂಕಣಿಗುದುರೆಯಿದೆ. ಮುಂಜಾವಿನಲ್ಲಿ ಸಬರ ಬಿಗಿದು ಮುಂಕಣಿ ಹಾಕಿದ ತುರಗದ ಥಟ್ಟು ಮಧ್ಯಾಹ್ನದ ವರೆಗೆ ಮನೆಯಿಂದ ನದಿಗೆ ನದಿಯಿಂದ ಮನೆಗೆ ಸಾರಿಗೆಯಿಡುವುದು. ಹೆಂಗಸರು ಗಂಡಸರು ಹುಡುಗರು ಹುಡುಗೆಯರು ಬೇರೂರಿಂದ ಅತ್ತೆಯ ಮನೆಗೆ ಬಂದ ಒಯ್ಯಾರದ ಹೊಸಮೊದಲುಗಿತಿಯರು ಹೊನ್ನವರೆಯ ಬೆತ್ತವನ್ನೆತ್ತಿ, 'ಹೈ, ಹೈ,' ಎಂದು ಹಯಗಳನ್ನೆಚ್ಚರಿಸುವ ಇಂಚರವೂ ವಾರುವಗಳ ವಂಗಡದ ಹೇಷಾರವವೂ ಕಿವಿಗಳನ್ನು ತುಂಬುವುವು. ಒಂದೆಡೆಯಲ್ಲಿ ದಿಗಂಬರ ವಟುಗಳು ವಾಹದ ಮೇಲೆ ಕುಳಿತು ಲಗಳಿ ಹೊಡೆಯುವ ಕೌತುಕವನ್ನು ಕಂಡರೆ ಮತ್ತೊಂದೆಡೆಯಲ್ಲಿ ಹೆತ್ತಮ್ಮನು ಅಕ್ಕರತೆಯಿಂದ ಮಗುವನ್ನು ಮುಂಕಣಿಯ ಮೇಲೆ ಕುಳ್ಳಿರಿಸಿದ ಮನೋಹರ ದೃಶ್ಯವನ್ನು ಕಾಣಬಹುದು. ಭೂಸುರರ ಸೇವಾಧರ್ಮವನ್ನಂಗೀಕರಿಸಿದ ಅಶ್ವವು ಪ್ರತಿಯಂತೆ ದಿನವೊಂದಕ್ಕೆ ದೇಪವನ್ನು ನವೆಸುತ್ತಿರುವುದು. ಮನೆಯಿಂದ ಹೊರಟ ಸಾಧುವಾದ ಘೋಟಕವು ನೇರವಾಗಿ ನದಿಗೆ ಹೋಗಿ ನಾಲ್ಕು ಘಟ ಗಂಗೆ ತುಂಬಿಕೊಂಡು ಮರಳಿ ಮನೆಗೆ ಬರುವುದು. ಆದರೂ ಸ್ವಭಾವವು ದುರತಿಕ್ರಮವಾಗಿದೆ. ಜಾತಿಸ್ನೇಹವು

ಒಮ್ಮೊಮ್ಮೆ ಉಕ್ಕೇರಿ ತುಂಬಿದ ಕೊಡ ತರುವ ತಾರ್ಕ್ಷ್ಯವು ತಪೋಭಾರವನ್ನಿಳುಹಿ ಬಾಂಧವರ ಭೆಟ್ಟಿಗೆ ಹೋಗುವುದು. ಯಜಮಾನನು ಕೊಡ ಉರುಳಿ ನುಗ್ಗಾದರೂ ಸ್ವಭಾವದ ತತ್ವವನ್ನರಿತು ವಾಜಿಯನ್ನು ಹಿಡಿದು ತಂದು ಅದಕ್ಕೆ ಕರ್ತವ್ಯದಕ್ಷತೆಯ ಎಚ್ಚರ ಕೊಡುವನು. ಬಳಿಕ ಅನುತಾಪಬಟ್ಟು ವಾಜಿಯು ಮಾರ್ಗವನ್ನವಲಂಬಿಸುವುದು. ಈ ರೀತಿಯಾಗಿ ಸಪ್ತಿಗಳ ಸಹಾಯದಿಂದಲ್ಲದೆ, ಹೆಗಲ ಮೇಲೆ ಇಟ್ಟುಕೊಂಡು ಒಯ್ಯುವ ಗಂಡಸರ, ಸೊಂಟದಲೆಗಳ ಮೇಲೆ ಹೊತ್ತುಕೊಂಡ ಹೆಂಗಸರ, ಕೊಡಗಳ ಸಂದಣಿಯು ಸುಂದರವಾಗಿ ಕಂಗೊಳಿಸುವುದು. ಸಂಜೆಗೆ ಮತ್ತೆ ಅದುವೆ ಉದ್ಯೋಗ; ಅದುವೆ ನೋಟ!

ನಮ್ಮ ಮನೆತನವು ಶೂರ್ಪಾಲಿಯ ಬುನಾದಿಯ ಒಕ್ಕಲು. ಅಶ್ವತ್ಥಾಚಾರ್ಯರು ನನ್ನ ಹಿರಿಯರು. ಆಚಾರ್ಯರು ವ್ಯಾಕರಣ ನ್ಯಾಯ ವೇದಾಂತ ಮೊದಲಾದ ಶಾಸ್ತ್ರಗಳಲ್ಲಿ ಪಾರಂಗತರು. ಕಾಶಿ, ಕುಂಭಕೋಣ, ಪದ್ಮಾವತಿ ಮುಂತಾದ ಸ್ಥಳಗಳಲ್ಲಿ ದ್ವೈತಾದ್ವೈತದ ವಾದ ನಡೆದಲ್ಲಿ ಹಿರಿಯರಿಗೆ ಉತ್ತರಾದಿಮಠದ ಔತಣ ಬರುವುದು ಖಂಡಿತ. ಆಚಾರ್ಯರು ಶ್ರೀಗಳವರ ಬಲಗೈಯೆಂದು ಖ್ಯಾತಿ. ಮನೆಯಲ್ಲಿ ನಿತ್ಯ ಪಾಠ; ಎಂಟು ಹತ್ತು ಶಿಷ್ಯರು ಯಾವಾಗಲೂ ಇದ್ದೇಯಿರುವರು. ಪಾಂಡಿತ್ಯದ ಹೆಮ್ಮೆಯಿಂದ ನಿತ್ಯಕರ್ಮಗಳನ್ನು ದುರ್ಲಕ್ಷಿಸುವ ಅನೇಕ ಸೂರಿಗಳನ್ನು ಕಾಣಬಹುದು. ಹಿರಿಯರ ಮಾತು ಹಾಗಲ್ಲ. ಜ್ಞಾನಕರ್ಮಗಳ ಸಮುಚ್ಚಯದ ಮೂಲಕ ಆಚಾರ್ಯರು ಸವ್ಯಸಾಚಿಗಳೆಂದು ಹೆಸರಾಗಿದ್ದರು. ಅವರು ವರ್ಷಕ್ಕೆ ಮೂರು ನಾಲ್ಕು ತಿಂಗಳು ಸಂಚಾರಕ್ಕೆ ಹೊರಡುವರು. ಮೈಮೇಲೆ ಜರದ ಶಾಲು ಹೊದ್ದುಕೊಂಡು, ತಲೆಗೆ ಮತ್ತೊಂದು ಶಾಲು ಸುತ್ತಿ, ಅದರ ಮೇಲೆ ಗೊಂಡೆ ಹಚ್ಚಿದ ಸಕಲಾತಿಯ ಕೆಂಪು ಕುಲಾಯಿ ಹಾಕಿ, ಹಲ್ಲಣ ಬಿಗಿದು ಹಸಿಬೆ ಹಾಕಿದ ಕುದುರೆಯನ್ನೇರಿ ಹಿರಿಯರು ಹೊರಟರೆಂದರೆ ನಾಲ್ಕು ಜನ ಶಿಷ್ಯರು ಅವರನ್ನು ಹಿಂಬಾಲಿಸುವರು. ಹೋದಹೋದಲ್ಲಿ ಯಜಮಾನರ ಮನೆಯಲ್ಲಿ ಪಾಠಪ್ರವಚನಗಳು ಪ್ರಾರಂಭವಾಗುವುವು. ಆಗ್ರಹವಿದ್ದಲ್ಲಿ ಪುರಾಣದ ಸಪ್ತಾಹವಾಗಿ ಮಂಗಳವೂ ಆಗುವುದುಂಟು. ಸಕ್ಕರೆಯನ್ನು

ಇರುವೆಯು ಮುತ್ತುವಂತೆ ಆಚಾರ್ಯರ ದಿವ್ಯವಾಣಿಯನ್ನು ಕೇಳಲು ಭಾವಿಕರು ಮುಗಿಬೀಳುವರು. ಪಾಂಡಿತ್ಯಕ್ಕೆ ತಕ್ಕಂತೆ ಅವರಿಗೆ ಸಂಭಾವನೆಯೂ ಆಗುವುದು. ಇತ್ತ ಮನೆಯಲ್ಲಿ ನಿತ್ಯ ಬ್ರಾಹ್ಮಣನ ಊಟ, ಹಬ್ಬಹುಣ್ಣಿವೆಗಳು, ಆತಿಥ್ಯಗಳು ಯಥಾಕ್ರಮವಾಗಿ ಸಾಗುವುವು. ಆಚಾರ್ಯರು ತಕ್ಕಮಟ್ಟಿಗೆ ದ್ರವ್ಯೋಪಾರ್ಜನೆಯನ್ನೂ ಮಾಡಿದರು. ಮನೆಯಲ್ಲಿ ಮಕ್ಕಳಿಲ್ಲದೊಂದೇ ಕೊರತೆ. ಕೊನೆಗೆ ನರಸಿಂಹನ ಅನುಗ್ರಹದಿಂದ ಆಚಾರ್ಯರ ಗತವಯಸ್ಸಿನಲ್ಲಿ ನಾನೊಬ್ಬನೆ ಪುತ್ರನು ಜನಿಸಿದೆನು ನರಸಿಂಹನೆಂದೇ ನನ್ನ ನಾಮಕರಣವಾಯಿತು. ನಾನು ನೆಲಕ್ಕೆ ಬೆನ್ನು ಹಚ್ಚದೆ ಕೈಗೊಂಬೆಯಂತೆ ಮಾತಾಪಿತೃಗಳ ತೊಡೆಯ ಮೇಲೆ ಬೆಳೆದೆನೆಂದು ಊರವರು ಅನ್ನುವುದನ್ನು ಕೇಳಿದ್ದೇನೆ. ಎಷ್ಟು ಉಂಡರೂ ಕಡಿಮೆ; ಎಷ್ಟು ಉಟ್ಟರೂ ಕಡಿಮೆ; ಏನು ತೊಟ್ಟರೂ ಕಡಿಮೆ; ಓರ್ವ ಲಕ್ಷ್ಮೀಪುತ್ರನಂತೆ ಬಳೆದೆನು.

ಮನೆತನದ ಪಾಂಡಿತ್ಯಪರಂಪರೆಯು ಅಖಂಡವಾಗಿ ಸಾಗಬೇಕೆಂದು ಹಿರಿಯರ ಹಂಬಲ. ಆಚಾರ್ಯರೆ ನನ್ನ ಗುರುಗಳು. ಚಿಕ್ಕವನಿರುವಾಗಲೆ ನನಗೆ ಶಬ್ದರೂಪಾವಲಿ, ಸಮಾಸಚಕ್ರ, ಅಮರಕೋಶ, ಮಣಿಮಂಜರಿ, ಮಧ್ವವಿಜಯಗಳು ಮುಖೋದ್ಗತವಾದುವು. ಆದರೂ ನನ್ನ ಒಲವು ಆಟಪಾಟಗಳ ಕಡೆಗೆ ಹೆಚ್ಚು. ಅದಕ್ಕಾಗಿ ಹಿರಿಯರು ಆಗಾಗ್ಗೆ ಸಿಟ್ಟುಮಾಡುವರು. ಅದನ್ನು ಕಂಡು ತಾಯಿಯು ಒಂದಿಲ್ಲೊಂದು ನೆವ ತೆಗೆದು ನನ್ನನ್ನು ತನ್ನ ತವರುಮನೆ ಕವುಟಕೊಪ್ಪಕ್ಕೆ ಕಳುಹುವಳು. ಬಳಿಕ ಆಚಾರ್ಯರು ಕಲಿತಷ್ಟು ಕಲಿಯಲೆಂದು ಹೆಚ್ಚಿಗೆ ನನ್ನ ಗೋಜಿಗೆ ಹೋಗುವುದನ್ನೇ ಬಿಟ್ಟುಕೊಟ್ಟರು. ಆದರೂ ಕಾವ್ಯನಾಟಕಗಳನ್ನು ಕೆಲಮಟ್ಟಿಗೆ ಓದಿದೆನು. ಶಾಸ್ತ್ರಾಭ್ಯಾಸದ ಕಠಿಣ ಕೆಲಸವು ನನ್ನಿಂದ ಸಾಂಗವಾಗಿ ನೆರವೇರಲಿಲ್ಲ. ಪಾಠಪ್ರವಚನಗಳನ್ನು ಕಿವಿದುಂಬ ಕೇಳಿರುವುದರಿಂದ ನನಗೆ ಬಹುಶ್ರುತನೆಂದೆನ್ನಲಿಕ್ಕೆ ಅಡ್ಡಿಯಿಲ್ಲ. ಸಂಸ್ಕೃತದಲ್ಲಿ ವ್ಯುತ್ಪತ್ತಿಯಿದೆ. ರಾಮಾಯಣ, ಭಾರತ, ಭಾಗವತಾದಿ ಪುರಾಣಗಳನ್ನು ಸರಸವಾಗಿ ಹೇಳಬಲ್ಲೆ. ರಾಮಾಯಣದೊಳಗಿನ ಸುಂದರಕಾಂಡ, ಮಹಾಭಾರತದೊಳಗಿನ ವಿರಾಟಪರ್ವ,

ಭಾಗವತದೊಳಗಿನ ದಶಮಸ್ಕಂಧ ಇವು ಸಾಧಾರಣವಾಗಿ ಮುಖೋದ್ಗತವಾಗಿವೆ.

ನಾನು ವಯಸ್ಸಿಗೆ ಬರುವಷ್ಟರೊಳಗೆ ಹಿರಿಯರು ಗಲಗಲಿಯ ಆಚಾರ್ಯರ ಮಗಳೊಡನೆ ನನ್ನ ಮದುವೆ ಮಾಡಿದರು. ಕೂಡಲೆ ನನ್ನ ಅಧ್ಯಯನಕ್ಕೆ ಮಂಗಳವಾಯಿತು. ಮುಂದೆ ಮೂರು ನಾಲ್ಕು ವರ್ಷಗಳಲ್ಲಿ ತಂದೆತಾಯಿಗಳೀರ್ವರೂ ಪರಲೋಕಕ್ಕೆ ಪ್ರಯಾಣ ಬಳೆಯಿಸಿದರು. ಅವರ ಆಶ್ರಯದಲ್ಲಿದ್ದು ನೈಮಪರೆತು ಮೆರೆದ ನನಗೆ ಬರಸಿಡಿಲು ಬಡಿದಹಾಗಾಯಿತು. ನನ್ನ ಸಂಸಾರವು ಸುಸೂತ್ರವಾಗಿ ಹೇಗೆ ಸಾಗುವುದೋ ಎಂಬ ಭಯದಿಂದ ಬೆಂಡಾದೆನು. ಆದರೂ ಮನೆತನ ನಡಿಸಲಿಕ್ಕೆ ಸಾಕಷ್ಟು ಸಾಧನಗಳಿದ್ದುದರಿಂದ ಸಂಸಾರ ಶಕಟಕ್ಕೆ ಗಂಡಹೆಂಡರೀರ್ವರು ಸಹಕಾರದಿಂದ ಧೈರ್ಯದಿಂದ ಹೆಗಲೊಡ್ಡಿದೆವು; ನೊಗ ಎತ್ತಿದೆವು; ಯೋಗ್ಯವಾದ ದಾರಿಯಿಂದ ನಡೆಯಿಸಲು ಪ್ರಚೋದಕನಾದ ಪಾರ್ಥಸಾರಥಿಯು ನಮ್ಮ ಬೆಂಬಲವಾಗಿರುವನೆಂಬ ವಿಶ್ವಾಸದಿಂದ ಬಂಡಿಯನ್ನು ಎಳೆಯತೊಡಗಿದೆವು. ಮನೆಯಲ್ಲಿ ಬೆಳ್ಳಿಬಂಗಾರ, ನಗದು ಹಣ, ಕಾಳುಕಡಿ, ವಸ್ತ್ರಪಾತ್ರೆಗಳು, ಕರೆಯುವ ಒಂದು ಕಾಳೆಮ್ಮೆ, ಮಂಕಣಿ ತರುವ ಒಂದು ತೇಜಿ ಇವೇ ಮೊದಲಾದುವುಗಳಿದ್ದುದರಿಂದ, 'ನನಗೇನು ಕಡಿಮೆ?' ಎಂಬ ಹಮ್ಮು ನನ್ನಲ್ಲಿ ಹಬ್ಬತೊಡಗಿತು. ಆಚಾರ್ಯರ ರೀತಿಯನ್ನೇ ಮುಂದುವರಿಸಿದೆನು. ಶಿಷ್ಯರು ಅಡಗಿ, ಪಾಠಪುರಾಣಗಳು ನಿಂತು, ಭಣಭಣ ಅನಿಸುವ ಮನೆಯನ್ನು ನನ್ನ ಸಂಗಡಿಗರು ತುಂಬಿ ತೆಗೆದರು. ದಿವಸಗಳು ಸುಖಮಯವಾಗಿ ಸಾಗತೊಡಗಿದುವು. ಹೊಳೆಯ ದಡದಲ್ಲಿರುವ ಹೊಲವು ಊರ ಸಮೀಪದಲ್ಲಿರುವುದರಿಂದ ಅಲ್ಲಿಯ ವರೆಗೆ ಹೋಗಿಬರಲಿಕ್ಕೆ ನನಗೆ ಹೊತ್ತೂ ಹಿಡಿಯುತ್ತಿರಲಿಲ್ಲ. ಮುಂಜಾವಿನಲ್ಲಿ ಮಂಕಣಿ ಹೊಡೆದೆನೆಂದರೆ ದಿವಸದ ನೀರಿನಿ ಕೆಲಸ ನೀಗಿತು. ಕುದುರೆಯನ್ನೇರಿ ಜಂಬುಕಂಡಿಯ ಸಂತೆಯನ್ನು ಮುಗಿಸಿಕೊಂಡು ಬಂದೆನೆಂದರೆ ವಾರದ ಸಾಮಗ್ರಿಯಾಯಿತು. ಆ ಮೇಲೆ ಹರಟೆಗೆ ಬಿಡುವು. ನನ್ನ ಮನೆಯು ನದಿಯ ದಾರಿಯಲ್ಲಿ ಊರ ಕೊನೆಗಿರುವುದರಿಂದ ಸುಂಕದ ಕಟ್ಟೆಯಾಗಿ ಪರಿ

ಣಮಿಸಿತು. ನಸ್ಯದ ಪುಡಿಯನ್ನೇರಿಸುತ್ತ ತುದಿ ಮೊದಲಿಲ್ಲದ ಮಾತು ನನ್ನ ಡಬ್ಬಿ ಬರಿದಾಗುವ ವರೆಗೆ ಮುಗಿಯುತ್ತಿರಲಿಲ್ಲ. ತದನಂತರ ಸ್ನಾನದ ಸಮಯವೊದಗಿತೆಂದು ಒಬ್ಬೊಬ್ಬರು ಹೊರಟು ಹೋಗುವರು. ಊಟವಾಗಿ ವಾಮಕುಕ್ಷಿಯಾಗುವದರೊಳಗಾಗಿಯೆ ಹೊಸ್ತಿಲದಲ್ಲಿ ಹೆಜ್ಜೆಯ ಸಪ್ಪಳವು ಕೇಳಬರುವುದು. ಮತ್ತೆ ಹರಟೆಗೆ ಸೂತಉವಾಚ. ಗದ್ಯಕ್ಕೆ ಪದ್ಯವನ್ನು ಪವಣಿಸಿ ನಾಟಕವನ್ನು ಹದಗೊಳಿಸುವಂತೆ ನನ್ನ ಮಿತ್ರರು ದೊಡ್ಡಾಟದಲ್ಲಿ ನುರಿತವರಾದುದರಿಂದ ಹರಟೆಗೆ ಪದತಾಳ ಮದ್ದಳೆಗಳಿಂದ ಸಂಗೀತದ ಸೊಬಗನ್ನು ತಂದುಕೊಡುವರು. ಸಂಜೆಯಾಗುವುದರೊಳಗಾಗಿ ಮತ್ತೊಂದು ಡಬ್ಬಿ ನಸ್ಯಕ್ಕೆ ಮುಕ್ತಾಯ. ಹರಟೆಯಿಂದ ಪ್ರಯೋಜನವಿಲ್ಲವೆಂಬುದು ಖೂಳ ಕಲ್ಪನೆ. ಗಲುಗಲಿ ಕವುಟಕೊಪ್ಪ, ಜಂಬುಕಂಡಿ, ಕಂಕಣವಾಡಿ, ಅಥಣಿ ಬಳಿಕ ಸವದಿ, ಸತ್ತಿ ಇವುಗಳನ್ನುಳಿದು ಬೇರೂರನ್ನು ನೋಡದೆಯಿದ್ದ ನನಗೆ ಎಲ್ಲ ಪಟ್ಟಣಗಳ ಪುಣ್ಯಕ್ಷೇತ್ರಗಳ ವಿವಿಧ ಜನಾಂಗಗಳ ನಡೆನುಡಿಗಳ ವಿವಿಧ ವ್ಯವಸಾಯಗಳ ದೃಶ್ಯವು ಕಣ್ಣ ಮುಂದೆ ಕಟ್ಟಿದಂತಾಯಿತು.

ನಸ್ಯದ ಮಹಿಮೆಯು ಅಗಾಧವಾದುದು ನನ್ನೊಡನೆ ಮಾತಾಡದಿದ್ದವರಿಗೂ ನಸ್ಯವು ನುಡಿಸ ತೊಡಗಿತು. ಊರಲ್ಲಿ ನಾನು ಎಲ್ಲರ ಗೆಳೆಯನಾದೆನು. ಕೆಲಸವಿಲ್ಲದಿದ್ದರೂ ಕೆಲವರು ನನ್ನ ಮನೆ ಸೇರಿ, ಒಂದೆರಡು ಒಣ ಮಾತು ಆಡಿ, ಹುಚ್ಚು ನಗೆ ನಕ್ಕು, ಒಂದು ಚಿಮುಟೆ ನಸ್ಯ ಎತ್ತಿ ಹೊರಟು ಹೋಗುವರು. ನದಿಯ ದಾರಿಯಲ್ಲಿ ನನ್ನನ್ನು ದೂರಿನಿಂದ ನೋಡಿ, ಬೇರೆ ಕೆಲಸದಲ್ಲಿ ತೊಡಗಿ ನನ್ನೆಡೆಗೆ ಆಕಸ್ಮಾತ್ತಾಗಿ ಬಂದಂತೆ ನಟಿಸಿ, ನಸ್ಯ ನೆಗವಿ ನಡೆಯುವವರನೇಕರು. ನಿಜ ವಿಷಯವು ನನಗೆ ಅಪರಿಚಿತವಾಗಿರಲಿಲ್ಲ. ಅಂತಹರೆಲ್ಲರು ನನ್ನ ಸ್ನೇಹಿತರೆಂದು ನಾನೆಂದೂ ಬಗೆಯಲಿಲ್ಲ. ಆದರೂ ನಸ್ಯದ ವೆಚ್ಚವೆಷ್ಟು? ಒಪ್ಪೊತ್ತಿಗೆ ಒಂದು ಬಿಲ್ಲಿ; ದಿವಸಕ್ಕೆ ಅರ್ಧಆಣೆ; ತಿಂಗಳಿಗೊಂದು ರೂಪಾಯಿ; ವರ್ಷಕ್ಕೆ ಹನ್ನೆರಡು ರೂಪಾಯಿಗಳು! ನಸ್ಯವು ನಿಜವಾಗಿ ವಶ್ಯಕರಿಯು. ನಸ್ಯದಿಂದ ಒಂದೆರಡು ಕೆಲಸಗಳೂ ನೆರವೇರತೊಡಗಿದುವು. ಕರಿಬೇವು ಹಿಡಿದು ನಸ್ಯ ಬೇಡುವವನು ತಾನಾಗಿಯೆ ಒಂದೆರಡು

ಕಡ್ಡಿಗಳನ್ನೊಪ್ಪಿಸುವನು. ಕೈಯಲ್ಲಿ ಪಲ್ಲೆಯ ಸೊಪ್ಪು ಹಿಡಿದವನು ನಸ್ಯದ ಹಂಗಿಗೊಳಗಾಗಿ ಒಂದು ಹಿಡಿ ಒಗೆದು ಹೋಗುವನು. ನನಗೆ ಕೆಲಸವಿದ್ದರೆ ಒಮ್ಮೊಮ್ಮೆ ನದಿಯಿಂದ ಮಂಕಣಿಯೂ ಮನೆಗೆ ಬರುವುದು. ಅಸ್ತು.

ಈ ರೀತಿಯಾಗಿ ಎಲ್ಲರಿಗೂ ಬೇಕಾಗಿ, ಯಾರ ಹೊಸ್ತಿಲವನ್ನೂ ಮೆಟ್ಟದೆ, ಯಾರ ಹಂಗಿಗೂ ಒಳಪಡದೆ, ನಿತ್ಯಕರ್ಮಗಳನ್ನು ನ್ಯೂನತೆಯಿಲ್ಲದೆ ನಡಿಸಿ, ಮನೆಗೆ ಬಂದ ಯಜಮಾನರ ಕಾರ್ಯಗಳನ್ನು ದಕ್ಷತೆಯಿಂದ ನೆರವೇರಿಸಿ, ಯದೃಚ್ಛಾಲಾಭಸಂತುಷ್ಟನಾಗಿ, ಅಯಾಚಿತ ವೃತ್ತಿಯನ್ನವಲಂಬಿಸಿ, ಲಕ್ಷ್ಮೀನರಸಿಂಹನ ಅನುಗ್ರಹದಿಂದ ಶೂರ್ಪಾಲಿಯಲ್ಲಿ ಸಡಗರದಿಂದ ಸಂಸಾರ ಸಾಗಿಸಿದೆನು.

## ಸಭಾಪರ್ವ

ಕುಟುಂಬಕ್ಕೆ ಆಧಾರಳಾದುದರಿಂದ ಹೆಂಡತಿಗೆ 'ಕುಟುಂಬಿನೀ' ಎಂದು ಸಂಸ್ಕೃತದಲ್ಲಿ ಸಂಬೋಧಿಸುವುದುಂಟು. ಆದುದರಿಂದ ಹೆಂಡತಿಯೇ 'ಕುಟುಂಬ' ಎಂಬುವುದು ರೂಢಿಯಲ್ಲಿ ಬಂದಿದೆ. ಹೆಂಡತಿಯಿಲ್ಲದ ಮನೆ ಹಾಳು ದೇಗುಲ. ಪರಮಾತ್ಮನ ಅನುಗ್ರಹದಿಂದಲೆ ಅನುರೂಪೆಯಾದ ಹೆಂಡತಿಯನ್ನು ಪಡೆಯುವುದು. ಕನ್ಯೆಯ ರೂಪ ಲಾವಣ್ಯ ಆರೋಗ್ಯ ಮನೆತನದ ಆರ್ಥಿಕಪರಿಸ್ಥಿತಿ ಇವುಗಳನ್ನಷ್ಟೇ ಜಾಗರೂಕರಾದವರು ಕಂಡುಹಿಡಿಯಬಹುದು. ಆಂತರಿಕ ಗುಣಗಳು ಪ್ರಸಂಗಾನುಸಾರವಾಗಿ ಪ್ರಚುರವಾಗುವುವು. ಕನ್ಯೆಯ ಪರೀಕ್ಷೆಯು ಮೊದಲು ಮೊದಲು ಸರಿಯಾಗಿ ಆಯಿತೆಂದು ಮನವರಿಕೆಯಾದರೂ ಮದುವೆಯಾದ ಮೇಲೆ ಸಂಸಾರವು ಸುಸೂತ್ರವಾಗಿ ಸಾಗಲಿಲ್ಲವೆಂದು ಮೋರೆ ಕಹಿ ಮಾಡುವ ಎಷ್ಟೋ ಕುಟುಂಬಿಗಳನ್ನು ಕಾಣಬಹುದು.

ನನ್ನ ಮಾತಾಪಿತೃಗಳು ತಾವೇ ಹುಡುಗೆಯನ್ನು ನೋಡಿ ಪರೀಕ್ಷಿಸಿ ನನಗೆ ಅಕ್ಕಿಯ ಕಾಳು ಹಾಕಿದರು. ನನ್ನ ಹಿತದ ವಿಷಯದಲ್ಲಿ ಅವರು ದಕ್ಷರಾಗಿದ್ದುದರಿಂದ, ಕನ್ಯೆಯ ಸಂಬಂಧವಾಗಿ ನನಗೇನೂ ಕೇಳಲಿಲ್ಲವೆಂದು ಕೆಡಕೆನಿಸಲಿಲ್ಲ. ನಾನು ಚಿಕ್ಕವನಾಗಿದ್ದುದರಿಂದ ನನಗೆ ಕೇಳುವ ಕಾರಣವೂ ಇರಲಿಲ್ಲ. ಮಂತ್ರಾಕ್ಷತೆ ಬಿದ್ದು ಅಂತಃಪಟ ಎತ್ತಿದ ಕೂಡಲೆ ಆದುದೇ ಹೆಂಡತಿಯ ಪ್ರಥಮ ದರ್ಶನ! ಆದರೂ ದರ್ಶನವೆಂದರೇನು ? ಮೋರೆ ಕೆಳಗೆ ಮಾಡಿದವಳು ಸಮಾರಂಭ ಮುಗಿಯುವ ವರೆಗೆ ಮೇಲೆ ಎತ್ತಲೇ ಇಲ್ಲ. ನನ್ನ ಮುಂದೆ ಕುಳಿತಾಗ ಆಕೆಯ ಸುತ್ತು ಮುತ್ತಲು ಯಾವಾಗಲು ಓರಗೆಯ ಗೆಳತಿಯರ ಗೊಂದಣಿಯಿದ್ದುದರಿಂದ ನನಗೂ ನಾಚಿಕೆಯಿಂದ ಅವಳನ್ನು ಕಣ್ದೆರೆದು ನೋಡುವುದಾಗಲಿಲ್ಲ. ಕಳ್ಳನೋಟದಿಂದ ಕಂಡ ಅನುಭವದಿಂದ ಹೆಂಡತಿಯು ಕುರೂಪೆಯಲ್ಲವೆಂಬುದನ್ನು ಕಂಡುಹಿಡಿದೆನು.

ಆತ್ಮೀಯತೆಯ ಮೂಲಕ ಬಾಯಿ ಬಿಚ್ಚಿ ತಮ್ಮ ಹೆಂಡತಿಯ ಗುಣಾನುವಾದ ಮಾಡುವುದರಲ್ಲಿ ಯಾರಿಗಾದರು ಕೊಂಚ ಸಂಕೋಚ. ಈ ನಿಯಮವು ನನಗೂ ಹತ್ತುವುದು. ಆದರೆ ಒಮ್ಮೆಯಾದರು ಆಕೆಯ ಗುಣವರ್ಣನೆಗೆ ಅಪ್ಪಣೆಯಿರಲಿ. ಮುಗುದನ ವಾಚಾಳತನವೆಂದು ನಗಬೇಡಿ. ಒಂದಿಲ್ಲೊಂದು ಕಾರಣದಿಂದ ನಮ್ಮಲ್ಲಿ ವಾದವಿವಾದವು ವಿಕೋಪಕ್ಕೆ ತಲುಪಿ, ವ್ಯರ್ಥ ಮನಸ್ತಾಪವುಂಟಾಗುವ ಪ್ರಸಂಗವು ನನ್ನೀ ದೀರ್ಘಾಯುಷ್ಯದಲ್ಲಿ ಒಂದೂ ದಿನ ಒದಗಲಿಲ್ಲವೆಂದು ಹೇಳಬಹುದು. ಮಡಿಮೈಲಿಗೆ ಎಂಜಲ ಮುಸುರೆಗಳ ವಿವೇಕದಲ್ಲಿ ಆಚಾರವಂತರ ಮಗಳಾದುದರಿಂದ ಆಕೆಯಿಂದ ನನ್ನ ಧರ್ಮಾಚರಣೆಯಲ್ಲಿ ಎಂದೂ ವ್ಯತ್ಯಯ ಬರಲಿಲ್ಲ. ಮನೆಗೆಲಸಗಳಲ್ಲಿ ಆಕೆಯನ್ನು ಮೀರುವ ಮಹಿಳೆಯರು ತೀರ ವಿರಳ. ಅಡುಗೆ ಫಲಾಹಾರಗಳನ್ನು ರುಚಿಕಟ್ಟಾಗಿ ಲೆಕ್ಕ ಹಾಕಿದಂತೆ ಸಿದ್ಧಗೊಳಿಸುವುದರಲ್ಲಿ ಆಕೆಯ ಹೆಮ್ಮೆ. ಸಂಡಿಗೆ ಇಡುವುದರಲ್ಲಿ ಹಪ್ಪಳ ಲಟ್ಟಿಸುವುದರಲ್ಲಿ ಶೇವಗೆ ಎಳೆಯುವುದರಲ್ಲಿ ಮಂಡಗೆ ಮಾಡುವುದರಲ್ಲಿ ಗುಳ್ಳೋರಿಗೆ ಕರಿಯುವುದರಲ್ಲಿ ಇಡಿ ಶೂರ್ಪಾಲಿಯೊಳಗೆ ಆಕೆಯೆ ಮಿಗಿಲು. ಮನೆ ಗುಡಿಸುವುದು ಸಾರಿಸು

ವುದು, ತರತರದ ರಂಗವಲ್ಲಿ ಹಾಕುವುದು, ಉಪಕರಣ ಪಾತ್ರೆಗಳನ್ನು ಮಿರಿಮಿರಿ ಮಿಂಚುವಂತೆ ತಿಕ್ಕಿ ತೀಡಿ ಅಚ್ಚುಕಟ್ಟಾಗಿರಿಸುವುದು ಇವೇ ಮೊದಲಾದುವುಗಳಲ್ಲಿ ಆಕೆಗೆ ಸರಿದೊರೆ ಕಾಣೆ. ಹಿಟ್ಟುನುಚ್ಚು, ಕಾಳು ಕಡಿ, ಹಾಳು ಮಾಡುವುದು ಆಕೆಗೆ ಅರಿಯದ ವಿಷಯ.

ಹೆಂಡತಿಯ ದಿನಚರಿಯೂ ಹೊಗಳತಕ್ಕುದು. ಒಂದು ತಾಸು ರಾತ್ರಿಯಿರುವಾಗಲೆ ಎದ್ದು ಮನೆ ಗುಡಿಸಿ, ದೇವರ ಮನೆ ಅಂಗಳಗಳನ್ನು ಸಾರಿಸಿ, ಹೊಸ್ತಿಲ ತೊಳೆದು, ಅವಳು ರಂಗವಲ್ಲಿ ಹಾಕುವಳು. ಅವಳ ಮೆಲುದನಿಯ ಉದಯರಾಗವನ್ನು ಕೇಳಿ ಹಾಸಿಗೆಯಿಂದ ಏಳುವೆನು. ಹೆಂಡತಿಯು ಹಾಸಿಗೆ ಸುತ್ತಿ ಚಾಪೆಯನ್ನು ಹಾಸಿದ ಬಳಿಕ ಅದರ ಮೇಲೆ ಕುಳಿತು ಒಂದು ಚಿಮುಟಿ ನಸ್ಯ ಏರಿಸಿದ ಮೇಲೆ ಮುಂದಿನ ಉದ್ಯೋಗ. ಅಡುಗೆಯ ವಿಷಯವನ್ನು ವಿಚಾರಿಸಿದ ನಂತರ ಅವಳ ಸಾಮಾನದ ಸಿದ್ಧತೆ. ಬೇನೆ ಬೇಸರಿಕೆಗಳು ಬಂದಾಗ ಹೆಂಡತಿಯ ಆರೈಕೆಯಿಂದಲೆ ಗುಣ ಹೊಂದುವೆನೆಂದು ನನ್ನ ವಿಶ್ವಾಸ. ಹೆಂಡತಿಯನ್ನು ಹುಡುಕುವ ಹೊಣೆಯು ನನ್ನ ಮೇಲೆಯೆ ಬಿದ್ದಿದ್ದರೆ ಇಂತಹ ಸುಗುಣಸಂಪನ್ನೆಯನ್ನು ಸಂಪಾದಿಸುವುದು ನನ್ನಿಂದಾಗುತ್ತಿರಲಿಲ್ಲ. ಪರಮಾತ್ಮನ ಸಂಕೇತದಿಂದಲೆ ಈ ಹೆಂಗೂಸುಗಳಧಿದೇವಿಯು ನನಗೆ ಮಾಲೆ ಹಾಕಿದುದು!

ನನ್ನ ಮಡದಿ ವಿನಯಶೀಲಳು, ಚದುರೆ. ಅವಳು ಒದರಿ ಮಾತಾಡುವುದು ಕ್ವಚಿತ್ತಾಗಿ. ಗಲುಗಲಿ ಕವುಟಕೊಪ್ಪಗಳಿಂದ ಆಪ್ತೇಷ್ಟರು ಬಂದರೆ ಅವರ ಆದರಾತಿಥ್ಯವನ್ನು ತಾರತಮ್ಯಾನುಸಾರವಾಗಿ ಕೈಕೊಳ್ಳುವಳು. ತಂದೆಯವರ ಸ್ನೇಹಿತರು ಬಂದರೆ ಯುಕ್ತಿಯಿಂದ ಆ ಮಾತು ಈ ಮಾತು ತೆಗೆದು ಅವರ ನಿತ್ಯನಿಯಮಗಳನ್ನರಿತು ವ್ಯವಸ್ಥೆ ಮಾಡುವಳು. ಆದರೆ ಕೊಂಚ ಸ್ತುತಿಪ್ರಿಯಳು. ಅನೇಕ ಜನ ಅಭ್ಯಾಗತರು ಆಕೆಯ ಅಡುಗೆ ಉಪಚಾರಗಳನ್ನು ಹೊಗಳಿ ಹೆಚ್ಚಿಗೆ ಒಂದೆರಡು ದಿವಸ ದೇವರ ಪೆಟ್ಟಿಗೆ ಬಿಚ್ಚಿ ಆತಿಥ್ಯ ಪಡೆಯುವರು. ತನ್ನ ತವರುಮನೆಯವರು ಬಂದ ಮೇಲೇನು ಕೇಳುವುದು? ಹಪ್ಪಳ ಸಂಡಿಗೆ ಬುರುಬುರಿ ಬಗೆಬಗೆಯ ಕಾಯಿಪಲ್ಲೆಗಳ ಸೂರಿ. ಒಂದು ದಿನ

ಮೈಸೂರು ಸೀಮೆಯ ಮಸಾಲೆಯ ಪದಾರ್ಥಗಳಾದರೆ ಮರುದಿವಸ ಮಹಾರಾಷ್ಟ್ರದ ಸವಿಯೂಟ. ಆಗ ನನಗೆ ನಮ್ಮೂರ ಪಕ್ವಾನ್ನಕ್ಕೆ ಇಷ್ಟೇಕೆ ಅನಾದರವೆಂದು ಸಿಟ್ಟುಬರುವುದು. ಆದರೆ ಆಕೆಯ ಅಪ್ಪರು ನನ್ನ ಬೀಗರೆಂಬುದನ್ನರಿತು ಬಾಯಿ ಬಿಗಿಹಿಡಿಯುವೆನು.

ಹಿರಿಯರು ಯಾತ್ರೆ ತೀರಿಸಿಕೊಂಡು ಬರುವ ಮುಂದೆ ಪಾತ್ರೆಗಳನ್ನು ತರುವುದು ವಾಡಿಕೆ. ಆದುದರಿಂದ ಉಡುಪಿ, ತಿರುಪತಿ, ಕಾಶಿ ನಾಶಿಕಗಳ ಬಗೆಬಗೆಯ ಪಾತ್ರೆಗಳು ಮನೆಯಲ್ಲಿ ವಿಪುಲವಾಗಿದ್ದುವು. ಯಾರಾದರು ಬಂದರೆ ಅವುಗಳನ್ನು ಹೊರಗೆ ತೆಗೆದು ಮನೆಯಲ್ಲಿ ಅಂದವಾದ ಪಾತ್ರೆಗಳಿವೆಯೆಂದೆನಿಸಿಕೊಳ್ಳುವ ಉಬ್ಬಟೆ ಹೆಂಡತಿಯಲ್ಲಿ ಬಹಳ. ಅಥಿತಿಗಳು ದೇವರ ಪೆಟ್ಟಿಗೆ ಬಿಚ್ಚಿ ಬೆಳ್ಳಿಯ ಸಂಪುಷ್ಟಗಳನ್ನು ತೆಗೆಯತೊಡಗಿದರೆಂದರೆ ಆಕೆಯು ತಿರುಗಣಿಯ ತಂಬಿಗೆಯನ್ನು ನೀರು ತುಂಬಿಡುವಳು. ಅತಿಥಿಯು, 'ಇದು ತಿರುಪತಿಯ ಕಂಚಿನ ತಂಬಿಗೆ, ಎಷ್ಟು ಚೆಂದವಾಗಿದೆ. ಕೇಳುವುದೇನು, ಅಶ್ವತ್ಥಾಚಾರ್ಯರ ಮನೆ! ಮೊನ್ನೆ ಜಂಬುಕಂಡಿಯಲ್ಲಿ ಜಂಬುಕೇಶ್ವರನ ಗುಡಿಯಲ್ಲಿಳಿದಾಗ ಯಾರೋ ನನ್ನ ತಂಬಿಗೆಯನ್ನು ಕಳವು ಮಾಡಿದರು. ಇದು ಆಗ್ರೋದಕವನ್ನು ತರಲು ಉಪಯುಕ್ತವಾಗಿದೆ. ಹೇಗಾದರು ಇದು ವೈಶಾಖ ಮಾಸ. ಉದಕಕುಂಭದ ದಾನವಾಯಿತು' ಎಂದು ಅಂದ ಕೂಡಲೆ ನಿರುತ್ತರಳಾಗಿ ಹೆಂಡತಿಯು ನನ್ನ ಅಪ್ಪಣೆ ಪಡೆದು ಅದನ್ನು ದಕ್ಷಿಣೆಯೊಂದಿಗೆ ದಾನ ಮಾಡುವಳು. ಹೀಗಾಗಿ ನೀರಾಂಜನಗಳು, ಧೂಪಾರತಿಗಳು, ಸೊಂಡೆಯ ಥಾಲಿಗಳು, ಗಿಂಡಿಗಳು, ತಾಬಾಣಗಳು, ತಂಬಿಗೆ ಥಾಲಿಗಳು ಒಂದೊಂದು ಕಡಿಮೆಯಾಗತೊಡಗಿದುವು. ನನ್ನ ಮೈಮೇಲೆ ಹಿರಿಯರ ಜರದ ಶಾಲು ಕಂಡರೆ, ಮತ್ತೊಬ್ಬ ಅತಿಥಿಯು, 'ಆಚಾರ್ಯರೆ ಚಳಿ ಬಹಳವಾಗಿದೆ. ಕಟಕಟ ನಡುಗುತ್ತ ದೇಶಾವರಿ ನಡಿಸಿದ್ದೇನೆ' ಎಂದು ಥಟ್ಟನೆ ನುಡಿದುದನ್ನು ಕೇಳಿ, ದಾಕ್ಷಿಣ್ಯಕ್ಕೊಳಗಾಗಿ ಶಾಲು ದಾನ ಕೊಡುವೆನು. ಈ ರೀತಿಯಾಗಿ ಮನೆಯೊಳಗಿನ ಶಾಲು ಸಕಲಾತಿ ಕಂಬಳಿ ದಡಿಯ ದೋತ್ರಗಳು ಅಡಗಹತ್ತಿದುವು. ಹೆಂಡತಿ ಕೊಟ್ಟರೆ ನಾನು, ನಾನು ಕೊಟ್ಟರೆ ಹೆಂಡತಿ, ಹೀಗೆ ಅನ್ಯೋನ್ಯರನ್ನು

ನಿರ್ಭತ್ಸಿಸಿ ಇಬ್ಬರೂ ಕಳವಳ ಪಡುವೆವು. ಇಹದೊಳಗಿನ ಧರ್ಮದ ಬಿತ್ತಿಗೆ ಪರದಲ್ಲಿ ಫಲ ದೊರೆಯುವುದೆಂಬ ನಂಬಿಗೆಯಿಂದ ಮೌನವಾಗಿರುವೆನು.

ಮನೆಯಲ್ಲಿ ಗಂಗೆ ಗೌರಿ ಜನ್ಮದಿವಸ ಪುಣ್ಯತಿಥಿ ಶ್ರಾದ್ಧ ಪಕ್ಷ ಹಬ್ಬಹುಣ್ಣಿವೆಗಳು ಯಥೋಚಿತವಾಗಿ ಸಾಂಗವಾದುವು. ಒಬ್ಬ ಅತಿಥಿಯು ಮನೆಗೆ ಬಂದು, 'ನಮ್ಮ ಮನೆಯಲ್ಲಿ ಕುಲದೇವತೆ ಬನಶಂಕರಿಯ ನವರಾತ್ರಿಯಿದೆ. ಇಂದು ಪಲ್ಲೆಯ ಹಬ್ಬವಿದೆ. ಮನೆಗೆ ಹೋಗಬೇಕೆಂದು ಪ್ರಯಾಸಬಟ್ಟರೂ ಸಾಧ್ಯವಾಗಲಿಲ್ಲ. ದೇವರ ಇಚ್ಛೆ. ನಿಮ್ಮಲ್ಲಿಯೆ ನೈವೇದ್ಯ ಕೊಟ್ಟರಾಯಿತು.' ಎಂದು ಸೂಚಿಸಿ ನವರಾತ್ರಿಯನ್ನು ನನ್ನ ಖರ್ಚಿನಿಂದ ನಿರ್ವಹಿಸಿ ತಾನು ಪುಣ್ಯ ಪಡೆಯುವೆನು. ಬೆಲ್ಲ ಬಿಟ್ಟ ಭೂಸುರನು ಸಕ್ಕರೆಯ ಸವಿಯೂಟವನ್ನು ಸವಿಯುವನು. ಹೂರಣನ್ನು ಬಿಟ್ಟವನು ಕೊಬ್ಬರಿಯ ಕಡಬು ತಿನ್ನುವನು. ಹಗಲಕಾಯಿ ಬಿಟ್ಟವನು ಕಾದಿಟ್ಟ ಕುಂಬಳಕಾಯಿಯನ್ನು ಒಡೆಸುವನು. ಸಂಜೆಗೆ ಊಟ ಬಿಟ್ಟವನು ಒಗ್ಗರಣೆಯ ಅವಲಕ್ಕಿಯೊಂದಿಗೆ ಹಪ್ಪಳಸಂಡಿಗೆ ಹೊಡೆಯುವನು. ಆಗಿಯ ಹಬ್ಬದಲ್ಲಿ ಮನೆಯೊಳಗೆ ನರಸಿಂಹನ ನವರಾತ್ರಿ. ಜಾತ್ರೆಗೆ ಬೀಗರು ಬಿಜ್ಜರು ಬರುವವರು. ನರಸಿಂಹಜಯಂತಿಯ ದಿವಸ ಅತಿಥಿ ಅಭ್ಯಾಗತರಿಗೂ ಬ್ರಾಹ್ಮಣರಿಗೂ ಫಲಾಹಾರಕ್ಕೆ ಔತಣ. ಅಂದು ಚಕ್ಕುಲಿ, ಕರಚಿಯ ಕಾಯಿ, ಉಂಡಿ, ಅನಾರಸ, ಮೊಸರವಲಕ್ಕಿ, ಚಟ್ನಿ, ಕೋಸಂಬರಿ, ಮೇಲೆ ಕುಡಿಯಲಿಕ್ಕೆ ಪಾನಕ, ಕೈಯಲ್ಲಿ ಶಾಂಬೂಲ, ದಕ್ಷಿಣೆ.

ಒಂದು ದಿನ ಗಲುಗಲಿಯಿಂದ ಅತ್ತೆಯವರು ಬಂದರು. ಹೆಂಡತಿಗೆ ಹಿಡಿಸಲಾರದಷ್ಟು ಆನಂದವಾಯಿತು. ದಿವಸೆರಡು ದಿವಸಗಳು ಹೋಗುತ್ತಲೆ ತಾಯಿಮಗಳ ರಹಸ್ಯದ ಮಾತುಗಳು ಪ್ರಾರಂಭವಾದುವು. ಹೆಂಡತಿಯ ಮೊಗದ ಪ್ರಸನ್ನತೆಯು ಕಡಿಮೆಯಾಗಿ ಅಲ್ಲಿ ಚಿಂತೆಯ ಚಿತ್ರವು ಮೂಡಲಾರಂಭಿಸಿತು. ಅತ್ತೆಯವರೊಡನೆ ನಾನು ಅಷ್ಟು ಗಳಿಬಳಿ ಮಾತಾಡುತ್ತಿರಲಿಲ್ಲ. ಆದರೂ

ಅವರ ಮನೆಯವರ ಕ್ಷೇಮಸಮಾಚಾರವನ್ನು ವ್ಯಕ್ತಿಶಃ ಕೇಳಿಕೊಂಡೆನು. ಅಲ್ಲಿಯೂ ಚಿಂತೆಯ ಎಳೆ ದೊರೆಯಲಿಲ್ಲ. ಹೆಂಡತಿಯನ್ನು ಕೇಳಿದರೆ ಆಕೆಯು, 'ನನಗೇತರ ಚಿಂತೆ?' ಎಂದು ತಿರುಗಿ ಪ್ರಶ್ನೆ ಮಾಡಿದಳು. ಅತ್ತೆಯವರು ಹೋದ ಬಳಿಕ ಎಲ್ಲ ಸಮಾಚಾರ ತಿಳಿಯುವುದೆಂದು ಸುಮ್ಮನಿದ್ದರೂ ನನ್ನ ಸ್ವಭಾವ ಸಂಶಯಕ್ಕೊಳಪಟ್ಟುದುದರಿಂದ ತಲೆಯೊಳಗಿನ ವಿಚಾರ ನಿಲ್ಲಲಿಲ್ಲ. ಅತ್ತೆಯವರನ್ನು ಕಮತಿಗ ಸಾತಪ್ಪನೊಡನೆ ಗಲುಗಲುಗೆ ಕಳುಹಿಕೊಟ್ಟೆನು. ಹೆಂಡತಿಯನ್ನು ಕೆಣಕಿ ಕೆಣಕಿ ಕೇಳಿದರೂ ಆಕೆಯ ಕಳವಳದ ಗುಟ್ಟು ಹೊರಬೀಳಲಿಲ್ಲ. ಮೋರೆ ಮಾತ್ರ ಗಂಭೀರವಾಗಿದ್ದಿತು. ಅವಳು ಮರುದಿವಸ ಹೊತ್ತುಂಟಲೆ ಎಂದಿನಂತೆ ಎದ್ದು ಲಗುಬಗೆಯಿಂದ ಕೆಲಸ ತೀರಿಸಿ ಕತ್ತಲೆಯಿರುವಾಗಲೆ ಕೊಡ ತೆಗೆದುಕೊಂಡು ಬಗಲಲ್ಲಿ ಸೀರೆ ಹಿಡಿದು ಮನೆ ಬಿಟ್ಟು ಹೊರಗೆ ಹೊರಟಳು. ನನ್ನ ಸಂಶಯವು ಪುಟಗೊಂಡಿತು. ಹಾಸಿಗೆಯ ಮೇಲೆಯೆ ಎದ್ದು ಕುಳಿತು ಯೋಚಿಸತೊಡಗಿದೆನು. 'ಇಷ್ಟು ಮುಂಜಾವಿನಲ್ಲಿ ಹೊಳೆಗೆ ಹೋಗುವ ಬಗೆ ಯಾವುದು? ಕತ್ತಲೆಯಲ್ಲಿ ಒಬ್ಬಳೆ ಹೊಳೆಗೆ ಹೋಗಿ ನೀರು ತರುವ ಕಾರಣವೇನು? ದಿವಸೆರಡು ದಿವಸಗಳಿಂದ ವಿಮನಸ್ಕಳಾಗಿದ್ದಾಳೆ. ಕಲುಷಿತ ವಿಚಾರವು ಇವಳ ತಲೆಯಲ್ಲಿ ಸೇರಿರಬಹುದೋ? ಛೇ ಛೇ, ಗಲುಗಲಿಯ ಆಚಾರ್ಯರ ಮಗಳು, ಶೂರ್ಪಾಲಿಯ ಆಚಾರ್ಯರ ಸೊಸೆ, ಇಂತಹಳಲ್ಲಿ ಕಲುಷಿತ ವಿಚಾರವೇ? ಮಕ್ಕಳಿಲ್ಲದ ಮೂಲಕ ನಿರಾಶಳಾಗಿ ನದಿ ಮುಳುಗಿ ಅಸುದೊರೆಯಬೇಕೆಂದು ಒಬ್ಬಳೇ ಗೌಪ್ಯವಾಗಿ ಹೋಗಿರಬಹುದೇ? ತಿಳಿಯದು! ಅವಳ ಹಿಂದಿನಿಂದಲೆ ಹೋಗಿ ಸಮೀಪದಲ್ಲಿ ಅಡಗಿ ನಿಂತರಾಯಿತು. ಎಲ್ಲವೂ ತಿಳಿಯುವದು' ಎಂದು ವಿಚಾರಿಸಿ ಲಗುಬಗೆಯಿಂದ ಕಂಬಳಿಯ ಮುಸುಕು ಹಾಕಿಕೊಂಡು ಮನೆಗೆ ಚಿಲಕ ಹಾಕಿ ಆಕೆಯ ಹಿಂದೆ ಹತ್ತು ಹೆಜ್ಜೆಯಲ್ಲಿ ಸಪ್ಪಳ ಮಾಡದೆ ನಡೆದೆನು. ಹೆಂಡತಿಯು ನದಿಯಲ್ಲಿಳಿದ ಕೂಡಲೆ ಹತ್ತಿರದ ಒಂದು ಜಾಲಿಯ ಗಿಡದಡಿಯಲ್ಲಿ ಮರೆಯಾಗಿ ನಿಂತೆನು. ಅವಳು ನಡುಮಟ್ಟ ನೀರಲ್ಲಿ ಮೈದೊಳೆದು ದಂಡೆಗೆ ಬಂದು ಕೊಡ ತುಂಬಿಕೊಂಡು ಕೈಯೊಳಗಿನ

ಸೀರೆಯನ್ನು ಹಿಂಡಿ ಹೆಗಲ ಮೇಲೆ ಹಾಕಿ ಒದ್ದೆಯಿಂದಲೆ ಗುಡಿಯ ಮಾರ್ಗವನ್ನು ಹಿಡಿದಳು. ಮತ್ತೊಂದು ದಾರಿಯಿಂದ ನಾನು ಹೊರಟು ದೇವಾಲಯದ ಬಲದ ಬಾಗಿಲದಲ್ಲಿ ನಿಂತು, ಅವಳು ದೇವರಿಗೆ ಇಪ್ಪತ್ತೈದು ಪ್ರದಕ್ಷಿಣೆ ನಮಸ್ಕಾರ ಹಾಕುವದನ್ನು ಎಣಿಸಿದೆನು. ಹೆಂಡತಿಯು ಗುಡಿಯಿಂದ ಹೊರಟೊಡನೆ ದುಡುದುಡು ಮನೆಗೆ ಓಡಿ ಹೋಗಿ ಹಾಸಿಗೆಯಲ್ಲಿ ಮುಸುಕು ಹಾಕಿಕೊಂಡು ಅಡ್ಡಾದೆನು. ಅವಳು ಸೀರೆಯನ್ನುಟ್ಟು ತುಳಸಿಯ ಗಿಡಕ್ಕೆ ನೀರೆರೆಯಲು ಬಂದು ನನಗೆ 'ಮುಂಜಾವಿನಲ್ಲೆದ್ದು ಮೈದೊಳೆದು ಹರಿವಂಶವನ್ನು ಕೇಳಲು ನನಗೆ ಬಹಳ ಮನಸ್ಸಾಗಿದೆ. ಮಾವಂದಿರು ಮಡಿದ ಮೇಲೆ ಮನೆಯಲ್ಲಿ ಪುರಾಣದ ಸಪ್ಪಿಲ್ಲ,' ಎಂದಳು. ನನ್ನಲ್ಲಿ ಸಂಶಯವಡಗಿ ನಾಚಿಕೆ ಬರತೊಡಗಿತು. ಅದನ್ನು ಬಚ್ಚಿಟ್ಟು ಚಿಮಿಟಿ ನಸ್ಯವನ್ನೇರಿಸಿ,

ನಾನು—ಪುರಾಣ ಕೇಳುವ ವಯಸ್ಸು ಇನ್ನೂ ದೂರದಲ್ಲಿದೆ. ಸೊಸೆ ಬಂದಳೆಂದರೆ ಅವಳಿಗೆ ಮನೆಗೆಲಸ ಹಚ್ಚಿ ಪುರಾಣಗಳಲ್ಲಿ ಕಾಲ ಕಳೆಯುವುದು ಅತ್ತೆಯಂದಿರ ಹೊಲಬು. ನಿನಗೇಕೆ ಇಷ್ಟು ಬೇಗ ಪುರಾಣದ ಹಂಬಲ?

ಹೆಂಡತಿ—ಯಾವ ಮಾತಿಗೂ ನಗೆಚಾಟಕೆಯವ್ವಾ. ಮಗ ಹುಟ್ಟಿ ಅವನ ಮದುವೆಯಾದಬಳಿಕಲ್ಲವೆ ಸೊಸೆಯ ಮಾತು? ಮಕ್ಕಳಿಲ್ಲದವರು ಮನೆಗೆಲಸದಲ್ಲಿ ತೊಡಗಿ ಪುರಾಣವನ್ನೇ ಕೇಳಬಾರದೆಂದರಾಯಿತು.

ನಾ—ಅದಕ್ಕೂ ವಯಸ್ಸಿನ ಮರ್ಯಾದೆಯಿದೆ.

ಹೆಂ— ಇರಲೊಲ್ಲದೇಕೆ ಬಿಡಲೊಲ್ಲದೇಕೆ. ಮುಂಜಾವಿನಲ್ಲಿ ಮೈದೊಳೆದು ಅರಳಿಯ ಮರದಪ್ಪನಿಗೆ ಪ್ರದಕ್ಷಿಣೆ ನಮಸ್ಕಾರ ಹಾಕಿ ನಾವಿಬ್ಬರೂ ಹರಿವಂಶವನ್ನು ಕೇಳಿದರೆ ಇಹದಲ್ಲಿಯೂ ಪರದಲ್ಲಿಯೂ ಸದ್ಗತಿಯಾಗುವುದೆಂದು ಗಲುಗಲಿಯಲ್ಲಿ ಪ್ರಶ್ನೆ ಕೇಳಿ ಅಮ್ಮನು ಹೇಳಿರುವಳು.

ನಾ:—ಇದಕ್ಕೇಕೆ ನಿಮ್ಮಮ್ಮನ ಪ್ರಶ್ನೆ. ನರಸಿಂಹನಿಗೆ ನಮಸ್ಕರಿಸಿ ಪುರಾಣ ಕೇಳಿದರೆ ಸದ್ಗತಿಯಾಗುವುದೆಂದು ಹೇಳಲಿಕ್ಕೆ ನಿಮ್ಮಮ್ಮನೇಕೆ? ಅವಳ ಪ್ರಶ್ನೆಯೇಕೆ? ಶೂರ್ಪಾಲಿಯಲ್ಲಿ ಅದು ಚಿಕ್ಕಮಕ್ಕಳಿಗೂ ಗೊತ್ತಿದೆ. ಆದರೂ ನೋಡು, ಪ್ರಾತಃಕಾಲವೆಲ್ಲ ಹರಟೆಯಲ್ಲಿಯೆ ಸವೆದು ಹೋಗುತ್ತಿದೆ. ಹರಟೆಯು ನನಗೆ ಬೇಸರವಾಗ ತೊಡಗಿದೆ. ಒಪ್ಪೊತ್ತಾದರು ಅದನ್ನು ತಪ್ಪಿಸಲು ಇದೊಂದು ಯುಕ್ತಿ. ನಾಳೆ ಮುಹೂರ್ತವಿದೆ. ಮುಂಜಾವಿನಲ್ಲಿ ಸ್ನಾನ ಮಾಡಿ ಹರಿವಂಶ ಪುರಾಣವನ್ನು ಪ್ರಾರಂಭಿಸುವೆನು. ಮಧ್ಯಾಹ್ನ ಕರಗಡುಬಿನ ನೈವೇದ್ಯವಾಗಲಿ.

ಇಷ್ಟೆಂದ ಕೂಡಲೆ ಹೆಂಡತಿಯು ಬಾಡಿದ ಕದಪು ಕೆಂಬೊಗರುದಳೆದು ಮೊಗದಾವರೆಯು ಅಲರಿ ತೊಂಡೆ ವಣ್ಬುಟೆಯಲ್ಲಿ ತೋರೆವಲ್ಲು ಎಸೆಯ ತೊಡಗಿದುವು! ನನಗೂ ಮಕ್ಕಳ ಆಶೆಯಿರಲಿಲ್ಲವೆಂದಲ್ಲ. ಹೆಣ್ಣುಮಕ್ಕಳು ಮಕ್ಕಳ ಬಯಕೆಯನ್ನು ಬಹಿರಂಗಕ್ಕೆಳೆಯುವರು. ಧೀರರಾದ ನನ್ನಂತಹ ಪುರುಷರು ಮನದಲ್ಲಿಯೆ ಕೊರಗುವರು.

ಹೆಂಡತಿಯ ಇಚ್ಛೆಯಂತೆ ನರಸಿಂಹನ ಸೇವೆಯನ್ನು ಕೈಕೊಂಡೆನು. ನೆರೆಹೊರೆಯ ಮುದುಕ ಮುದುಕೆಯರು ನನ್ನ ಪುರಾಣಕ್ಕೆ ಬರ ತೊಡಗಿ ನರಸಿಂಹಾಚಾರ್ಯರು ಅಶ್ವತ್ಥಾಚಾರ್ಯರ ಪರಂಪರೆಯನ್ನು ಕಾಯ್ದುಕೊಂಡರೆಂದು ಹೊಗಳ ತೊಡಗಿದರು. ಹರಟೆಗೆ ಬರುತ್ತಿದ್ದ ಕೆಲವುಂಡಾಡಿಗರು, 'ನಸ್ಯದ ನರಸಪ್ಪನಿಗೆ ಪುತ್ರೇಚ್ಛೆಯಾಗಿದೆ. ಮಗನಿಗೆ ಯಾವ ಪಟ್ಟವನ್ನು ಕಲ್ಪಿಸಿರುವನೊ ತಿಳಿಯದು. ಇಲ್ಲವೆ ಮನೆಯೊಳಗೆ ತಂಡುಲ ತುಟ್ಟಿಯಾಗಿರಬಹುದು,' ಎಂಬ ಪರಿಹಾಸ ಮಾಡುವುದನ್ನು ನದಿಯ ದಾರಿಯಲ್ಲಿ ಕೇಳಿದೆನು. ಒಪ್ಪೊತ್ತಿನ ಹರಟೆ ಹಾಳಾಗಿ, ನಸ್ಯಕ್ಕಾಗಿ ನಾಸಿಕ ಹಸಿದ ಹೊಟ್ಟೆಯ ಕಿಚ್ಚು ಹೊರಗೆಡಹುವುದು ಇದೊಂದು ರೀತಿಯೆಂದು ಬಗೆದು ಮೌನವ್ರತ ಧಾರಣ ಮಾಡಿದೆನು. ಮಧ್ಯಾಹ್ನವನ್ನಷ್ಟೆ ಹರಟೆಗಾಗಿ ಮೀಸಲಾಗಿರಿಸಿ ಹೊಸ ದಿನಚರಿಯನ್ನು ಬಳಕೆಯಲ್ಲಿ ತಂದೆನು. ಹರಿವಂಶದ ಮಂಗಳವಾದ ಬಳಿಕ ಭಾರತ ಭಾಗವತ ರಾಮಾಯಣ ಮಾಘಮಾಹಾತ್ಮ್ಯಗಳು ಒಂದರ ಹಿಂದೊಂದು ಸಾರಿಗೆ ಹಿಡಿದುವು.

ನೆರೆಮನೆಯ ಮುದುಕೆಯು, 'ಲಕ್ಷ್ಮಂಬಾಯಿಗೆ ಬಯಕೆಗಳಾಗ ತೊಡಗಿವೆ' ಎಂಬ ಸುದ್ದಿಯನ್ನು ಹರಡಿದಳು. ಅದು ಗಲುಗಲಿಗೂ ಮುಟ್ಟಿತು. ಅತ್ತೆಯವರೇ ಬಂದು ಮಗಳನ್ನು ಕರೆದೊಯ್ದು ಕುಪ್ಪಸ ಮಾಡಿ ತಿರುಗಿ ಕಳುಹಿಕೊಟ್ಟರು. ಬಳಿಕ ಊರೊಳಗೆಲ್ಲ ಕುಪ್ಪಸದ ಮೇಲೆ ಕುಪ್ಪಸ. ಸೀಮಂತೋನ್ನಯನವೂ ನೆರವೇರಿತು. ಬಾಣತಿತನವು ಮನೆಯಲ್ಲಿಯೇ ಆಗಬೇಕೆಂದು ನನ್ನ ಮನೀಷೆ. ಅತ್ತೆಯವರು, 'ಮೊದಲಿನ ಹೆರಿಗೆಯು ತವರುಮನೆಯಲ್ಲಿಯೇ ಆಗುವುದು ಸಂಪ್ರದಾಯ. ಕೆಲಸಕ್ಕೆ ನೆರವಾಗುವವರು ಇಲ್ಲಿ ಯಾರೂ ಇಲ್ಲ. ಶೂರ್ಪಾಲಿ ಗಲುಗಲಿಗಳು ಬೇರೆಯಲ್ಲ. ಎರಡೂ ಊರುಗಳಲ್ಲಿ ನರಸಿಂಹನ ಸಾನ್ನಿಧ್ಯವಿದೆ. ನಾವೂ ನರಸಿಂಹನ ಒಕ್ಕಲು' ಎಂದು ಆಗ್ರಹ ಮಾಡತೊಡಗಿದರು. ಪಾಪ ಮುದುಕೆ, ನನ್ನ ಮನದಳವು ಅವಳಿಗೇನು ಗೊತ್ತೆಂಬುದನ್ನು ತಿಳಿದು ನಿರ್ವಾಹವಿಲ್ಲದೆ ಸಮ್ಮತಿಯಿತ್ತೆನು. ಜಗನ್ನಿರ್ಮಿತಿಗಾಗಿ ಕೃತಿಪ್ರದ್ಯುಮ್ನರು ಪುದುಗೊಂಡಿದ್ದಂತೆ ಇಷ್ಟ ನಮಗೆ ಆ ವಿಯೋಗದ ವಿಚಾರವು ದುಸ್ಸಹವಾಯಿತು. ಆದರೂ ಪುತ್ರಪ್ರಾಪ್ತಿಯ ಮುಂಗಡ ಮನವರಿಕೆಯಿಂದ ಅದರಭಾರವು ಕೊಂಚ ಹಗುರಾಯಿತು. ಬಲಿತ ಬ್ರಹ್ಮಚಾರಿಗಳಿಗೂ ಆಕಾಲಿಕ ವಿಧಿವಿಲಾಸಕ್ಕೊಳಗಾದ ವಿಧುರ ವಿಧವೆಯರಿಗೂ ದಾಂಪತ್ಯವು ಶೃಂಗಾರೈಕರಸಮಯವಾಗಿ ತೋರುವುದು. ಆದರ ಕಷ್ಟನಷ್ಟಗಳು ನಮ್ಮಂತಹ ಅನುಭಾವಿಗಳಿಗಷ್ಟೇ ಗೊತ್ತು!

ಒಂದು ದಿನ ಅತ್ತೆಯ ಮನೆಯ ಕಮತಿಗ ಬೇಡರ ಬೀರನು ಬಂದು, ನಗುತ್ತ ಪಾವುಡದೊಳಗಿನ ಪತ್ರವನ್ನು ತೆಗೆದು ನನ್ನ ಕೈಯಲ್ಲಿತ್ತು, ಮುಜುರೆ ಮಾಡಿ, 'ಅಪ್ಪನವರಿಂದ ಖುಶಾಲಿಯಾಗಬೇಕು' ಎಂದು ನುಡಿದನು. ಆದನ್ನೋದಿ ಮಗ ಹುಟ್ಟಿದುದನ್ನು ತಿಳಿದು ಹರ್ಷಪುಳಕಿತನಾದೆನು. ಥಾವಳಿಯನ್ನುಟ್ಟು ದೇವರಿಗೆ ಮಂಗಳಾರತಿ ಮಾಡಿದೆನು. ಒಂದು ತಾಬಾಣದಲ್ಲಿ ಸಕ್ಕರೆ ತುಂಬಿ, ತೆಂಗಿನಕಾಯಿ ತೆಗೆದುಕೊಂಡು ಗುಡಿಗೆ ಹೋಗಿ, ಅವುಗಳನ್ನು ಅರ್ಚಕನ

ಮುಂದಿರಿಸಿ, 'ಈಗ ಬರುವೆನೆಂ' ದು ನುಡಿದು, ನದಿಗೆ ಹೋಗಿ ಸ್ನಾನ ಮಾಡಿ, ಮರಳಿ ಬಂದು ನೈವೇದ್ಯ ಇಡಿಸಿ, ಮಂಗಳಾರತಿ ಮಾಡಿಸಿ, ನರಸಿಂಹನನ್ನು ನಮಸ್ಕರಿಸಿ ಮನೆಗೆ ಮರಳಿದೆನು. ಅಡುಗೆ ಮಾಡಿ, ನಾನುಂಡು, ಬೀರನಿಗೆ ಹೊಟ್ಟೆತುಂಬ ಗೋದಿಯ ಹುಗ್ಗಿಯನ್ನು ಹಾಕಿದೆನು. ಬಳಿಕ ಬೀರನಿಂದ ಕೂಸು ಬಾಣತಿಯರ ವೃತ್ತಾಂತವನ್ನು ವಿವರನಾಗಿ ಕೇಳಿಕೊಂಡೆನು. ಬೀರನಿಗೆ ಆಗ್ರಹಮಾಡಿ ಆ ದಿನ ಮನೆಯಲ್ಲಿಯೆ ಇಟ್ಟುಕೊಂಡೆನು.

ಗೆಳೆಯರು ಈಗ ತಾನೆ ಬರುವರೆಂದು ಆ ಪತ್ರವನ್ನು ಚಾಪೆಯ ಮೇಲೆ ಬಿಚ್ಚಿಯೊಗೆದು ಬೀರನ ಸಂಗಡ ಮಾತಾಡುತ್ತ ಕುಳಿತೆನು. ಅಷ್ಟರಲ್ಲಿ, ನಾಮದ ನಾರಾಯಣ, ಅಕ್ಷಂತಿಯ ಅನಂತ, ಹಿತ್ತಲಮನೆ ಹಯಗ್ರೀವ, ಕಟ್ಟೆಯ ಮನೆಯ ಕೃಷ್ಣಪ್ಪ ಮುಂತಾದವರು ಬಂದು ಬೀರನು ಗಲುಗಲಿಯುವನೆಂದು ಕಂಡುಹಿಡಿದರು. ನಾರಾಯಣನಿಗೂ ನನಗೂ ಸಲುಗೆ ಹೆಚ್ಚು. ಆವನು ಗಟ್ಟಿಯಾಗಿ ಪತ್ರವನ್ನು ಓದಿಬಿಟ್ಟನು. ಆ ಸುದ್ದಿ ಊರೊಳಗೆ ತತ್‌ಕ್ಷಣ ಹಬ್ಬಿತು. ಎಲ್ಲ ಮಿತ್ರರು ಕಲೆತರು. ಸಂಜೆಗೆ ಪುರಾಣೆಯ ಚಟ್ಟ ಮೊಸರವಲಕ್ಕಿಯ ಸಮಾರಂಭವಾಯಿತು. ಬೀರನಿಗೆ ದಡಿದೋತ್ರದ ಜೋಡು ಉಡುಗೊರೆ ಕೊಟ್ಟು ಮೇಲೊಂದು ಶುಭ್ರವನ್ನು ಕೈಯಲ್ಲಿರಿಸಿದೆನು. ಪತ್ರವೊಂದನ್ನು ಬರೆದು ಅದರಲ್ಲಿ ಮಗನಿಗೆ 'ಅಶ್ವತ್ಥ' ಎಂಬ ನಾಮಕರಣವಾಗಬೇಕೆಂದು ತಿಳಿಸಿದೆನು.

ಮಗನ ತೊಟ್ಟಿಲಬಟ್ಟಲವು ಮನೆಗೆ ಬಂದಿತು. ನನ್ನ ಆನಂದಕ್ಕೂ ಐಶ್ವರ್ಯಕ್ಕೂ ಮೇರೆದಪ್ಪಿತು. ಹೆಂಡತಿಯ ಹಿಗ್ಗು ಅದಕ್ಕೂ ಹೆಚ್ಚಾಯಿತು ಬರಬರುತ್ತ ಮನೆಗೆ ಹೆಂಡತಿಯೆ ಹಿರಿಯಳೆಂಬುದು ಮನವರಿಕೆಯಾಗತೊಡಗಿತು. ತಂದೆಯವರು ತೀರಿಕೊಂಡ ಮೇಲೆ ಹತ್ತು ಹನ್ನೆರಡು ವರ್ಷಗಳಲ್ಲಿ ನಮಗೆ ಐದು ಅಪತ್ಯಗಳಾದುವು. ಮೂರು ಗಂಡು, ಎರಡು ಹೆಣ್ಣು. ಶುಕ್ಲಪಕ್ಷವಾದೊಡನೆ ಕೃಷ್ಣಪಕ್ಷ ಬರುವಂತೆ ಈ ಗಂಡುಹೆಣ್ಣುಗಳ ಪರಿವಿಡಿಯಾಯಿತು.

ನಮ್ಮ ಚೊಚ್ಚಲ ಮಗನ ಹೆಸರು ಹನುಮಂತ. ಅಶ್ವತ್ಥನೆಂದು ಅವನ ತೊಟ್ಟಿಲ ಹೆಸರಿದ್ದರೂ ಹೆಂಡತಿಯು ಯತ್ನದಿಂದ ತನ್ನ ತಂದೆಯ ಹೆಸರನ್ನೇ ರೂಢಿಯಲ್ಲಿ ತಂದಳು. ದಮಯಂತಿಯು ಮರುಚಲ. ಆಕೆಗೆ ಪ್ರೀತಿಯಿಂದ ದಮ್ಮಿಯೆಂದು ಕರೆಯುವೆವು. ಆವಳ ಬೆನ್ನ ಮೇಲಿನವನು ಭೀಮನು. ಭೀಮನ ಇಟ್ಟ ಹೆಸರು ಗೋವಿಂದ. ಆದರೆ ನೆರೆಮನೆಯ ಮುದುಕೆಯ ಮೃತಗಂಡನ ಹೆಸರೂ ಅದೇ ಇದ್ದುದರಿಂದ ಅವಳು ಭೀಮನೆಂಬ ಹೆಸರನ್ನೇ ಬಳಕೆಯಲ್ಲಿ ತಂದಳು. ನಾಲ್ಕನೆಯ ಅಪತ್ಯ ಕನ್ಯೆ. ಅವಳ ಹೆಸರು ಪದ್ಮಾವತಿ. ಇಂತಹ ಚೆಂದ ಹೆಸರನ್ನು ಕೆಡಿಸಿ ಹೆಂಡತಿಯು ಪಮ್ಮಿಯೆಂದು ಕರೆಯತೊಡಗಿದಳು. ಪದ್ಮಾವತಿಯ ನಂತರ ಹುಟ್ಟಿದವನು ಮಗನು. ವಾಯುದೇವರ ಮೂರೂ ಅತಾರಗಳ ನಾಮಸ್ಮರಣೆಯು ಅನಾಯಾಸವಾಗಿ ಆಗುತ್ತದೆಂದು ತಿಳಿದು ಮೂರನೆಯ ಮಗನಿಗೆ ' ಮಧ್ವ ' ಎಂಬ ಹೆಸರಿಡಿಸಿ ಜಾಗರೂಕತೆಯಿಂದ ಅದನ್ನೇ ನೆಲೆಗೊಳಿಸಿದೆನು.

ಶೂರ್ಪಾಲಿಯಲ್ಲಿ ನಾನೇ ದೊಡ್ಡವನೆಂದು ಜನರು ತಿಳಿಯಲಾರಂಭಿಸಿದರು. ಊರೊಳಗಿನ ಚಿಕ್ಕಪುಟ್ಟ ಕಲಹಗಳು ನನ್ನಿಂದಲೇ ಬಗೆಹರಿಯತೊಡಗಿದುವು. ಮನೆಯ ಬಾಗಿಲ ಮುಂದೆ ಎಂಜಲ ಪತ್ರಾವಳಿಗಳನ್ನು ಒಗೆದ ಜಗಳ, ನದಿಯ ಮೇಲೆ ಮಡಿವಸ್ತ್ರವನ್ನುಡುವಾಗ ಮೈಲಿಗೆಯಿಂದ ನೀರುಜ್ಜಿದ ವ್ಯಾಜ್ಯ, ಮೊದಲಾದವುಗಳಿಗೆ ನಾನೇ ಪಂಚ. ಎರಡೂ ಪಕ್ಷಗಳಿಗೆ ಬುದ್ಧಿಯನ್ನು ಹೇಳಿ ಜಗಳ ಬಿಡಿಸುವೆನು. ಬಡಿವಾಡಿ ಬೇಸತ್ತ ಪಕ್ಷವು ನನ್ನ ನಿರ್ಣಯವನ್ನೇ ಮನ್ನಿಸುವುದು. ಶಾಸ್ತ್ರದ ನಿಯಮಗಳನ್ನು ನಿರ್ಣಯಿಸಿ ಹೇಳುವ ಧರ್ಮಾಧಿಕಾರವೂ ನನ್ನನ್ನೇ ಕೂಡಿತು. ನಿಜವಾಗಿ ಹೇಳಬೇಕಾದರೆ ನಾನೇನು ಅಷ್ಟು ಧರ್ಮಶಾಸ್ತ್ರದ ಅಧ್ಯಯನ ಮಾಡಿದವನಲ್ಲ. ಆದರೂ ತಂದೆ ಅಶ್ವತ್ಥಾಚಾರ್ಯರ ಪರಂಪರೆಯಲ್ಲಿ ಬಳೆದವನು; ಅವರ ಸಂಪ್ರದಾಯದಲ್ಲಿ ನುರಿತವನು; ಆದುದರಿಂದ ಧರ್ಮನಿರ್ಣಯ ಕೊಡುವುದರಲ್ಲಿ ನನ್ನಲ್ಲಿ ಅಧಿಕಾರವಿರುವುದೆಂದು ಜನರ ತಿಳಿವಳಿಕೆ. ಶೂರ್ಪಾಲಿಯಲ್ಲಿ

ಶಾಸ್ತ್ರ ಬಲ್ಲವರಿಲ್ಲವೆಂದು ತಿಳಿಯಬೇಡಿ. ನನ್ನ ನಿರ್ಣಯಗಳು ಅನುಕೂಲವಾಗಿರುವುದರಿಂದಲು, ನಾನು ವಿಧಿಸಿದ ಪ್ರಾಯಶ್ಚಿತ್ತಗಳು ಮೃದುವಾಗಿರುವುದರಿಂದಲು, ನನ್ನ ಮೇಲೆಯೆ ಜನರ ವಿಶ್ವಾಸ ಬಹಳ. ನಿರ್ಣಯಕ್ಕೆ ಬರುವ ವಿಷಯಗಳಲ್ಲಿ ಜನನಮರಣಾಶೌಚದ ವಿಷಯವೇ ಹೆಚ್ಚು. ಸಜ್ಯೋತಿ ಪಕ್ಷಿಣಿ ತ್ರಿರಾತ್ರಗಳ ತಾತ್ವಿಕ ವಿಚಾರವೇನು ಪ್ರಯೋಜನ? ಸಪಿಂಡ ಸಗೋತ್ರ ಬಂಧುತ್ರಯ ಸಮಾನೋದಕರ ಜೊಂಜಾಟವೇಕೆ? ಸ್ರಾವ ಪಾತ ಪ್ರಸವಗಳ ಪೀಕಲಾಟವೇಕೆ? ಯಾವುದಾದರೊಂದು ಪಂಚಾಂಗವನ್ನು ತೆಗೆದು ಓದಿ ನಿರ್ಣಯ ಕೊಡುವೆನು. ಚಾಣಾಕ್ಷರಾದವರು ಮತ್ತೊಂದು ಪಂಚಾಂಗವನ್ನು ತೋರಿಸಿ ಪಂಚಾಂಗ ಪಂಚಾಂಗಗಳೊಳಗಿನ ಭೇದವನ್ನು ನನ್ನ ಲಕ್ಷ್ಯಕ್ಕೆ ತಂದುಕೊಡುವರು. ಧರ್ಮಸಿಂಧು ನಿರ್ಣಯಸಿಂಧು ಛಲಾರಿಗಳನ್ನು ಚೆನ್ನಾಗಿ ಅಭ್ಯಾಸ ಮಾಡಿರದಿದ್ದರೂ ಆಚಾರ್ಯರ ಪರಂಪರೆಯಲ್ಲಿ ಸುಸಂಸ್ಕೃತನಾಗಿದ್ದುದರಿಂದ ಸಂಶಯದ ಸಂದರ್ಭದಲ್ಲಿ ನನ್ನ ಅಂತಃಕರಣದ ಪ್ರವೃತ್ತಿಯನ್ನೇ ಪ್ರಮಾಣವಾಗಿಟ್ಟುಕೊಂಡು ನಿರ್ಣಯ ಕೊಡುವೆನು. ಎರಡು ಏಕಾದಶಿಯ ವಿಚಾರ ನಡೆದಲ್ಲಿ ನನ್ನ ಒಲವು ಒಂದೇ ಏಕಾದಶಿಯ ಕಡೆಗೆ. ಹರಿವಾಸರದಕಿಂತಲು ಸಾಧನೆಯ ಕಡೆಗೆ ನನ್ನ ಎಳೆತ ಹೆಚ್ಚು. ಚಾತುರ್ಮಾಸದ ಶಾಕವ್ರತದಲ್ಲಿ ಖಾರದ ಬೆರಿಕೆಯಿಲ್ಲದ ಕಡಲೆಯ ಹಿಟ್ಟು, ಉದ್ದಿನ ಹಿಟ್ಟು ನೆಕ್ಕಿ ಬಾಯಿ ಕೆಟ್ಟವರಿಗೆ ಹೊನ್ನಗೋನೆಯ ಪಲ್ಲೆಯನ್ನು ಒಂದೆರಡು ದಿವಸ ತಿನ್ನಲಿಕ್ಕೆ ಅಡ್ಡಿಯಿಲ್ಲವೆಂದು ಹೇಳುವೆನು. ಕೊನೆಯ ದ್ವಿದಲವ್ರತದಲ್ಲಿ ಸೋಲಿನ ನೀರುಸಾರು ಕುಡಿದು ಕುಡಿದು ತಲೆಹಿಡಿದು ಬೇಸತ್ತವರಿಗೆ, 'ಹೆಸರಿನ ಬೇಳೆ ತೆಗೆದುಕೊಳ್ಳಬಹುದು. ವಾದಿರಾಜರ ಮಠದ ಸಂಪ್ರದಾಯದಲ್ಲಿ ಬರುತ್ತದೆ. ಅವರೂ ನಮಗೆ ಗುರುಗಳು' ಎಂದು ಸಾವಕಾಶವಾಗಿ ಸೂಚಿಸುವೆನು. ದ್ವಾದಶಿಯ ದಿವಸ ತುತ್ತೆರಡುತುತ್ತು ತೆಗೆದುಕೊಂಡ ಬಳಿಕ ವೈಲಿಗೆ ಯಾದ ಮುದುಕೆಗೆ ಸಂಜೆಗೆ ವೈದೊಳೆದು ಬೆಲ್ಲ ಹಿಟ್ಟು ತಿಂದು ನೀರು ಕುಡಿಯಲಿಕ್ಕೆ ಪ್ರತ್ಯವಾಯವಿಲ್ಲವೆಂದು ವಿಧಿಸುವೆನು. ನನ್ನಲ್ಲಿ ಪ್ರಾಯಶ್ಚಿತ್ತದಲ್ಲಿ ಶ್ರದ್ಧೆಯಿಲ್ಲವೆಂದಲ್ಲ. ಚಿಕ್ಕಪುಟ್ಟ ಲೋಪಗಳಿಗೆ ತಾರತಮ್ಯ

ರಹಿತ ಭೀಕರ ಪ್ರಾಯಶ್ಚಿತ್ತಗಳಾದರೆ ತಪ್ಪುಗಳೇ ಬೆಳಕು ಕಾಣಲಿಕ್ಕಿಲ್ಲವೆಂದು ನನ್ನ ಭೀತಿ. ಪ್ರಾಯಶ್ಚಿತ್ತಗಳು ಮೃದುವಾಗಿದ್ದರೆ ಧರ್ಮಾಚರಣೆಯಲ್ಲಿ ಶ್ರದ್ಧೆ ಬೆಳೆಯುವುದೆಂದು ನನ್ನ ಮನವರಿಕೆ! ಈ ಬಗೆಯಾಗಿ ಆಪ್ತರು ಇಷ್ಟರು ಮಿತ್ರರು ಮೊದಲಾದವರಲ್ಲಿ ಮನೆತನಸ್ಥ ಆಚಾರ್ಯನೆಂದು ಹೆಸರು ಪಡೆದು, ಹೆಂಡತಿಮಕ್ಕಳೊಡನೆ ಗಾರ್ಹಸ್ಥ್ಯವನ್ನು ಬಿಗುವಾಗಿ ಸಾಗಿಸಿದೆನು.

# ಅರಣ್ಯಪರ್ವ

## ೧. ದಾರಿದ್ರ್ಯವಿಪಾಕ ವರ್ಣನೆ

'ಕುಳಿತು ಉಣ್ಣುವವನಿಗೆ ಕುಡಿಕೆ ಹೊನ್ನು ಸಾಲದು' ಎಂದು ತಂದೆಯವರು ಆಗಾಗ್ಗೆ ಅನ್ನುತ್ತಿದ್ದುದು ನನ್ನ ಅನುಭವಕ್ಕೆ ಬರತೊಡಗಿತು. ಗಂಡಹೆಂಡರ ಅರಿವೆ ಅಂಚಡಿ ವ್ರತ ಉಪವಾಸ ಉದ್ಯಾಪನೆಗಳ ವೆಚ್ಚ, ಮಕ್ಕಳ ಪಾಟಿಪುಸ್ತಕ ಉಡುತೊಡುವುಗಳ ಅಕ್ಕರತೆಯ ವೆಚ್ಚ ಹಬ್ಬಹುಣ್ಣಿವೆ ಹವ್ಯಕವ್ಯ ಶ್ರಾದ್ಧಪಕ್ಷ ನವರಾತ್ರಿಗಳ ವೆಚ್ಚ, ಆಪ್ತೇಷ್ಟರು ಅತಿಥಿ ಅಭ್ಯಾಗತರ ಆತಿಥ್ಯದ ವೆಚ್ಚ, ಇವೇ ಮೊದಲಾದುವುಗಳ ಮೂಲಕ ನನ್ನ ಖರ್ಚು ಮಿತಿಮೀರಿ ಬೆಳೆಯಿತು. ಮನೆಗೆ ಬರುವ ಯಜಮಾನರು ದಿನವೊಂದಕ್ಕೆ ಕಡಿಮೆಯಾಗತೊಡಗಿದರು. ಬಂದ ಯಜಮಾನರ ಆಡಂಬರ ಹೆಚ್ಚು, ಮುಷ್ಟಿ ಬಿಗಿ. ಹೀಗಾದುದರಿಂದ, ನನ್ನ ಆಯ ಅಳಿದು, ಬೀಯ ಬೆಳೆದು, ನಿಲವಿಗೆ ನೆಲೆಯಿಲ್ಲದಾಯಿತು. ಮನೆಯ ವಸ್ತ್ರವೊಡವೆಗಳು ಒಂದರ ಹಿಂದೊಂದು ಒತ್ತೆಬಿದ್ದು ಮಾರಿಹೋದುವು. ಪ್ರಸ್ತಪ್ರಯೋಜನಗಳಿಗೆ ಉಪಯೋಗಿಸತಕ್ಕ ಭಾಂಡಿಗಳು ಬಯಲಾದುವು. ಯಾರಿಗೂ ತಿಳಿಯದಂತೆ ಜಂಬು

ಕಂಡಿಯಲ್ಲಿ ಒಬ್ಬ ಮಾರವಾಡಿಯಲ್ಲಿ ನನ್ನ ವ್ಯವಹಾರ. ಅವನು ಹೇಳಿದುದೇ ದರ; ನನಗೆ ದೊರೆತುದೇ ಬೆಲೆ. ಕೊನೆಗೆ ಹೆಂಡತಿಯ ಮೈಮೇಲೆ ಮಂಗಳಸೂತ್ರವೊಂದೇ ಉಳಿದು, ನಿತ್ಯ ಅಡುಗೆಗೆ ಸಾಕಾಗುವ ಭಾಂಡಿಗಳಷ್ಟೇ ನಿಂತುವು. ಹಬ್ಬಕ್ಕೊಮ್ಮೆ ಹನುಮ ಭೀಮರು ಹೊಸ ಅಂಗಿ ಬೇಡುವರು. 'ಮುಂದಿನ ಹಬ್ಬಕ್ಕೆ ಹೊಸ ಅಂಗಿಗಳನ್ನು ಹೊಲಿಸುವೆನು,' ಎಂದು ಅವರನ್ನು ಸಂತೈಸುವೆನು. ದಮ್ಮಿ ಪಮ್ಮಿಯರು 'ಅಪ್ಪಾ, ನಮಗೆ ಅಂತಹ ಪತ್ತಲ ಬೇಕು, ಇಂತಹ ಪೋಲಕ ಬೇಕು,' ಎಂದು ನನ್ನನ್ನೆಳೆಯುವರು. ನಾನು ಹೆಂಡತಿಗೆ, 'ಮನೆಯೊಳಗಿನ ಖಣ ತೆಗೆದು, ದಮ್ಮಿಪಮ್ಮಿಯರಿಗೆ ಕುಪ್ಪಸ ಹೊಲಿದು ಕೊಡಬಾರದೇ?' ಎಂದು ನುಡಿದು, ಮಕ್ಕಳ ಹಾಲಿನ ಹಸಿವನ್ನು ನೀರಿನಿಂದ ತಣಿಸುವೆನು.

ಸಿರಿವಂತನಿಗೆ ಮಾನಮರ್ಯಾದೆಗಾಗಿ ಕಳವಳಬಡುವ ಕಾರಣವಿಲ್ಲ. ಕೆಲವರು ಸ್ವಭಾವಸಿದ್ಧಸೌಜನ್ಯಕ್ಕಾಗಿ ಕೆಲವರು ಆಸೆಗಾಗಿ ಕೆಲವರು ಅಂಜಿಕೆಗಾಗಿ ಹೀಗೆ ಎಲ್ಲರೂ ಧನವಂತನಿಗೆ ಮರ್ಯಾದೆ ಮಾಡುವರು. ಹೊಟ್ಟೆಯ ಪಾಡಿಗಾಗಿ ಹರಿದಾಡುವ ಬಡವನಲ್ಲಿ ಮಾನ ಮರ್ಯಾದೆಗಳ ಹಂಬಲವೇ ಇಲ್ಲ. ಸಿರಿಯಡಗಿ ಬಡತನ ಬಂದವನಿಗೆ ಮಾನಮರ್ಯಾದೆಗಳು ಹೆಚ್ಚಾಗಿ ಬಾಧಿಸುವುದುಂಟು. ಅಂತಹನು ಬಡತನ ಬಚ್ಚಿಟ್ಟು ಸಿರಿವಂತನ ಸೋಗು ಹಾಕತೊಡಗುವನು. ಮುಂಗೈಯ ದಾರಿದ್ರ್ಯವು ಮೊಳಕೈಗೆ ಬಂದಿತೆಂದರೆ ವೇಷ ಬಿಸುಟು ಬಯಲಿಗೆ ಬರುವನು.

ನಮ್ಮೊರ್ವರ ಸ್ಥಿತಿಯು ಹಾಗೆಯೆ ಆಯಿತು. ಹೆಂಡತಿಗೆ ಓರಗೆಯವರು, 'ಲಕ್ಷ್ಮಂಬಾಯೀ, ಗೋಟು ಪಾಟಲಿಗಳನ್ನೇಕೆ ತೆಗೆದಿರುವೆ? ಕೊರಳಲ್ಲಿ ಮಂಗಳಸೂತ್ರದ ಸಾಮಾನವು ಕಾಣುವುದಿಲ್ಲ?' ಎಂದು ಕೇಳಿದರೆ ಅವಳು, 'ಊರೊಳಗೆ ಕಳ್ಳರ ಹಾವಳಿ ಹೆಚ್ಚಾಗಿದೆ. ನಮ್ಮ ಮನೆ ಊರ ಕೊನೆಗಿದೆ. ಎಚ್ಚರದಿಂದಿರಬೇಕಾಗಿದೆ,' ಎಂದು ಉತ್ತರ ಕೊಡುವಳು. ಹಣದ ಅಭಾವದ ಮೂಲಕ ಹೊಸ ಸೀರೆಗಳನ್ನು

ಕೊಳ್ಳುವುದು ನಿಂತುದರಿಂದ, ಗಂಟಿನೊಳಗಿನ ರೇಶಿಮೆಯ ಸೀರೆಯನ್ನು ಹೆಂಡತಿ ಉಟ್ಟುದನ್ನು ಕಂಡು ಕೆಲವು ಹೆಂಗೆಳೆಯರು, 'ಲಕ್ಷ್ಮಂಬಾಯೀ, ರೇಶಿಮೆಯ ಸೀರೆಯನ್ನು ನೀರೊಳಗೆ ಹಾಕಿ ಏಕೆ ಹರಿಯುತ್ತೀಯೇ? ಇದು ಸೊಸೆಗೆ ಮೇಲುದುವಾಗುತ್ತಿರಲಿಲ್ಲವೇ,? ಎಂದು ಕೇಳಿದುದಕ್ಕೆ ಹೆಂಡತಿಯು, 'ಈಗಿನ ಸೊಸೆಯಂದಿರಿಗೆ ಹಳೆಯ ತರಹದ ಸೀರೆ ಕುಪ್ಪಸಗಳು ಸೇರುವುದಿಲ್ಲ. ಅವರಿಗೆ ಕೊಯಿಮುತ್ತೂರ ಜರದ ಪತ್ತಲಬೇಕು. ಪೋಲಕ ಜಂಪರಗಳನ್ನು ಹಾಕುವವರಿಗೆ ಜರದ ಖಣಗಳ ಉಪಯೋಗವೇನು? ನಾನೇ ತೊಟ್ಟು ಹರಿಯುವವಳು. ಮಕ್ಕಳ ಮದುವೆಯಲ್ಲಿ ಸೊಸೆಯಂದಿರುಗಳಿಗೇನು ಹೊಸ ಪತ್ತಲಗಳ ಕೊರತೆ?' ಎಂದು ಎದೆಗುದಿಯನ್ನು ಬಚ್ಚಿ ನಗುತ್ತ ಹೇಳುವಳು. ನಾನಂತೂ ಸೇಲಂ, ನಾಗಪುರ ಹುಬ್ಬಳ್ಳಿ ಶಾಹಪುರಗಳ ದಡಿ ದೋತ್ರಗಳನ್ನು ಹೊದ್ದುಟ್ಟು ಹರಿದು ತೀರಿಸಿದೆನು. ಮನೆಯಲ್ಲಿ ಉಣ್ಣುವ ಜನರೂ ಪಕ್ವಾನ್ನಗಳೂ ಕಡಿಮೆಯಾದರೂ ಹಬ್ಬಹುಣ್ಣಿವೆ ಮುಂತಾದುವುಗಳ ಆಡಂಬರವು ಮೊದಲಿನಂತೆಯೆ ಇದ್ದೇ ಇದ್ದಿತು.

ಕೊನೆಗೆ ಆಡಂಬರಕ್ಕೂ ಎಡೆಯಿಲ್ಲದ ಬಾರಿ ಬಂದಿತು. ಸಂತೆಯ ದಿವಸವು ಶೂಲವಾಗಿ ಪರಿಣಮಿಸತೊಡಗಿತು. ಮೇಲಾಗಿ ಆಗಿಯ ಜಾತ್ರೆ ಸಮೀಪಿಸಿತು. ಜಂಬುಕಂಡಿಯಲ್ಲಿ ಉದ್ದರಿ ಬಹಳವಾದುದರಿಂದ ಅಲ್ಲಿ ಮೋರೆ ತೋರಿಸುವುದು ಕಠಿಣವಾಯಿತು. ಈ ಕೂಟಪ್ರಶ್ನೆಯನ್ನು ಕುರಿತು ವಿಚಾರಿಸತೊಡಗಿದೆನು. ನನ್ನ ಹೊಲದ ನೆನಪಾಯಿತು. 'ಸಾತಪ್ಪನು ಈ ವರ್ಷದ ಬಿರಾಡ ಕೊಟ್ಟು ಪಾವತಿ ಪಡೆದಿದ್ದರೂ ಅವನಿಂದ ನೂರು ರೂಪಾಯಿ ಮುಂಗಡವನ್ನೇಕೆ ಕೇಳಬಾರದು? ಅವನು ಒಪ್ಪದಿದ್ದರೆ ಮತ್ತೊಂದು ಒಕ್ಕಲು ಹುಡುಕಿ ತೆಗೆದು ಅವನ ಕಡೆಯಿಂದ ಮುಂಗಡ ಪಡೆಯಬೇಕು,' ಎಂದು ವಿಚಾರಿಸಿ ಸಾತಪ್ಪನನ್ನು ಕೇಳಲು ಅವನು ಹೊಲದ ಸಾವುಕಾರನು ಕೈಯೊಳಗೆ ಸಿಕ್ಕನೆಂದು ಬಗೆದು ನೂರು ರೂಪಾಯಿ ಮುಂಗಡ ಕೊಟ್ಟನು. ಜಂಬುಕಂಡಿಯೊಳಗಿನ ಉದ್ದರಿಗಳು ಕೆಲ ಮಟ್ಟಿಗೆ ಕಡಿಮೆಯಾದುವು. ಆಗಿಯ ಹಬ್ಬವು

ಸುಸೂತ್ರವಾಗಿ ಸಾಗಿತು. ಹಣಮನು ಮುಲ್ಕೀ ಪರೀಕ್ಷೆಯಲ್ಲಿ ಪಾಸಾದನು. ಮಗನಿಗೆ ಕೆಲಸ ಹತ್ತಿ ನನ್ನ ದಾರಿದ್ರ್ಯವು ಕೊನೆಗಾಣುವುದೆಂದು ನೆನೆದು ಹರ್ಷಭರಿತನಾದೆನು. ಆದರೂ ಹೊಟ್ಟೆಯೊಳಗಿನ ಕಳವಳ ನಿಲ್ಲಲಿಲ್ಲ.

ಒಂದು ದಿವಸ ನಾರಾಯಣನು ದೇಶಾವರಿ ತೀರಿಸಿಕೊಂಡು ಮನೆಗೆ ಭೆಟ್ಟಿಗೆ ಬಂದನು. ತನ್ನ ಸಂಚಾರದ ಕತೆ ಹೇಳಿದ ಬಳಿಕ ನಾನು, 'ನಾರಾಯಣಾ, ಹಣಮನ ಮುಲ್ಕಿಯ ಪರೀಕ್ಷೆ ಇಳಿದಿದೆ. ನಿನಗೆ ಬೆಳಗಾವಿ, ಧಾರವಾಡ, ಹುಬ್ಬಳ್ಳಿ, ವಿಜಾಪುರಗಳಲ್ಲಿ ದೊಡ್ಡ ದೊಡ್ಡ ಅಧಿಕಾರಿಗಳ ಪರಿಚಯವಿದೆ. ಹಣಮನಿಗೊಂದು ಕೆಲಸ ಕೊಡಿಸಬಾರದೇ? ರೊದ್ದರಾಯರು ನಮ್ಮೂರ ಬಹಳ ಜನರಿಗೆ ಮಾಸ್ತರಿಕೆಯ ಕೆಲಸ ಕೊಡಿಸಿದರು. ಶೂರ್ಪಾಲಿಯವರ ಮೇಲೆ ರಾಯರ ಪ್ರೀತಿ ಬಹಳ. ಅವರಿಗೆ ಹೇಳಿ ಮಗನಿಗೊಂದು ಕೆಲಸ ಹಚ್ಚಬಾರದೇ?' ಎಂದೆನು. ನಾರಾಯಣನು, 'ರೊದ್ದರಾಯರು ಶೂರ್ಪಾಲಿಯ ಊರಿಗೆಯೇ ಅನ್ನ ಕೊಟ್ಟರು! ಅವರು ಈಗ ಪೆನಶನು ಪಡೆದಿದ್ದಾರೆ. ಈಗ ಅವರ ಕೈಯಲ್ಲಿ ಕೆಲಸ ಕೊಡುವ ಅಧಿಕಾರವಿಲ್ಲ. ಬೆಳಗಾವಿ ಧಾರವಾಡಗಳೊಳಗಿನ ಕೆಲಜನ ಅಧಿಕಾರಿಗಳ ಪರಿಚಯ ನನಗಿದೆ. ಆದರೆ ಹಣಮನು ತೀರ ಚಿಕ್ಕವನಿರುವುದರಿಂದ ಅವನಿಗೆ ಈಗ ಕೆಲಸ ದೊರೆಯಲಾರದು. ಅವನು ವಯಸ್ಸಿಗೆ ಬಂದಬಳಿಕ ಪ್ರಯತ್ನಿಸುವೆನು,' ಎಂದು ಉತ್ತರ ಕೊಟ್ಟನು. ಅದಕ್ಕೆ ನಾನು 'ಅಲ್ಲೋ, ಚಿಕ್ಕಮಕ್ಕಳಿಗೆ ಸರಕಾರದವರು ವ್ಯರ್ಥ ಶ್ರಮವನ್ನೇಕೆ ಕೊಡುತ್ತಿರುವರು. ಪಾಸಾದರೂ ಕೆಲಸವಿಲ್ಲವಾದರೆ ಪರೀಕ್ಷೆಗೆ ಕೂಡ್ರುವುದಾದರು ಏತಕ್ಕೆ?' ಎಂದು ಕೇಳಲು, ನಾರಾಯಣನು, 'ಆಚಾರ್ಯರೇ, ಪರೀಕ್ಷೆಯಲ್ಲಿ ಪಾಸಾದವರಿಗೆ ಕೆಲಸ ಹುಡುಕಲಿಕ್ಕೆ ಅಧಿಕಾರ ದೊರೆಯುತ್ತದೆ. ದೈವವಿದ್ದವರಿಗೆ ಕೆಲಸ ದೊರೆಯುವುದು' ಎಂದನು. ನಾನು, 'ಪರೀಕ್ಷೆ ಪಾಸಾದರೂ ದೈವದ ಮೇಲೆಯೇ ಭಾರ ವಲ್ಲವೇ?' ಎಂದು ಕೇಳಿದುದಕ್ಕೆ ಅವನು, 'ದೈವವಿಲ್ಲದೆ ಈ ಜಗತ್ತಿನಲ್ಲಿ

ಯಾವ ಕೆಲಸವೂ ಸಫಲವಾಗುವುದಿಲ್ಲ' ಎಂದು ಉತ್ತರವನ್ನಿತ್ತನು. ಬಳಿಕ ಹಣಮನು ಏನು ಮಾಡಬೇಕೆಂದು ಕೇಳಿದುದಕ್ಕೆ ನಾರಾಯಣನು, 'ವಯಸ್ಸಾಗುವ ದಾರಿಯನ್ನು ನೋಡಬೇಕು ಆ ಮೇಲೆ ಅಧಿಕಾರಿಗಳ ಕಚೇರಿ ಮನೆಗಳಿಗೆ ಪ್ರದಕ್ಷಿಣೆ ಹಾಕಿ ತನ್ನ ದೈವ ಪರೀಕ್ಷಿಸಬೇಕು!' ಎಂದನು. ಹಣಮನ ನೋಕರಿಯ ಮೇಲೆ ಭಾರ ಹಾಕಿ ಮನಸ್ಸಿನಲ್ಲಿಯೆ ಮಂಡಗೆಯುಂಡ ನನ್ನ ಹೊಟ್ಟೆಯಲ್ಲಿ ಸಹಸ್ರ ಇರುವೆಗಳು ಕಡಿದಂತಾಗಿ ಅಸಹ್ಯ ವೇದನೆಯಾಗತೊಡಗಿತು! ನಾನು ಸ್ತಬ್ಧನಾಗಿ ಕುಳಿತುದನ್ನು ಕಂಡು ನಾರಾಯಣನು, 'ಆಚಾರ್ಯರೇ, ಭಯಪಡುವ ಕಾರಣವಿಲ್ಲ. ಹಣಮನು ಬುದ್ಧಿವಂತನಾಗಿದ್ದಾನೆ. ಇಂಗ್ರೇಜಿ ಕಲಿತು ಪರೀಕ್ಷೆ ಕೊಟ್ಟರೆ ನೋಕರಿಗೆ ಹೆಚ್ಚು ಸುಲಭವಾಗುತ್ತದೆ,' ಎಂದುದಕ್ಕೆ ನಾನು 'ನಾರಾಯಣಾ, ನನ್ನ ಸಂಸಾರ ನೋಡು; ಹಣಮನ ಶಿಕ್ಷಣದ ಖರ್ಚು ಎಲ್ಲಿಂದ ಕೊಡುವುದು. ನರಸಿಂಹನು ಮಾಡಿಸಿದ್ದಾಗುವುದು' ಎಂದು ನುಡಿದು ನಿಟ್ಟುಸಿರು ಬಿಟ್ಟೆನು.

ದಾರಿದ್ರ್ಯದ ದಾರುಣ ಅವಸ್ಥೆಯಲ್ಲಿಯೂ ಚಿತ್ತವೃತ್ತಿಯನ್ನು ಶಾಂತವಾಗಿರಿಸುವ ಧೀರರಿದ್ದಾರೆ. ದಾರಿದ್ರ್ಯದ ಹೊಸ ದೀಕ್ಷೆಯನ್ನು ಪಡೆದ ನನ್ನಂತಹರಲ್ಲಿ ತಾಳ್ಮೆ ತೀರ ಕಡಿಮೆ. ಕ್ಷುಲ್ಲಕ ವಿಷಯಗಳಿಗೂ ನನ್ನ ತಲೆ ಕಾಯತೊಡಗಿತು. ಹೆಂಡತಿಮಕ್ಕಳ ಕೈದಪ್ಪಿ ಪಾತ್ರೆಗಳು ಕೆಳಗೆ ಬಿದ್ದರೆ ರೇಗಿ ಬಾಯಿಗೆ ಬಂದಂತೆ ಬೈಯುವೆನು. ಊಟಕ್ಕೆ ಕುಳಿತಾಗ ಮಕ್ಕಳು ಏನಾದರೂ ಬೇಡಿ ಹಟ ಮಾಡಿದರೆ ಒಮ್ಮೆಲೆ ಊಟ ಬಿಟ್ಟು ಎದ್ದು ಹೊಡೆಯಲಿಕ್ಕೆ ಹೋಗುವೆನು. ಒಂದು ದಿನ ಹಣಮನು ಸಂಧ್ಯಾವಂದನೆ ಮಾಡದೆ ಎಲೆಯ ಮೇಲೆ ಕುಳಿತನೆಂದು ನನ್ನ ಕಲ್ಪನೆಯಾಯಿತು. ಆಗ ನಾನು, 'ಹಣಮಾ, ಸಂಧ್ಯಾವಂದನೆ ಮಾಡಿದರೆ ಊಟ; ಇಲ್ಲವಾದರೆ ಊಟವಿಲ್ಲ' ಎಂದು ಗದ್ದರಿಸಿ, ಹೆಂಡತಿಗೆ ಅವನ ಎಲೆ ಬಡಿಸಲು ಪ್ರತಿಬಂಧಿಸಿದೆನು. ಹಣಮನು, 'ನದಿಯಲ್ಲಿ ಸಂಧ್ಯಾವಂದನೆ ಮಾಡಿದ್ದೇನೆ,' ಎಂದು ಮೆಲ್ಲನೆ ಉತ್ತರ ಕೊಟ್ಟನು. 'ನನ್ನ

ಪಿತ್ತ ತಲೆಗೇರಿತು. ಅಷ್ಟರಲ್ಲಿ ಹೆಂಡತಿಯು, 'ಅವನು ನದಿಯಲ್ಲಿ ಸಂಧ್ಯಾವಂದನೆ ಮಾಡುವುದನ್ನು ನೋಡಿದ್ದೇನೆ. ಮಧ್ಯಾಹ್ನವಾಗಿದೆ, ಹುಡುಗರು ಹಸಿದಿದ್ದಾರೆ, ಹೊಟ್ಟೆತುಂಬ ಉಣ್ಣಲಿ' ಎಂದು ನುಡಿದು ಬಡಿಸಲಿಕ್ಕೆ ಹೋಗಲು ನಾನು, 'ಅಧರ್ಮದಲ್ಲಿಯೂ ಹಟಮಾರಿ ತನವೇ' ಎಂದು ನುಡಿದು ಹತ್ತಿರದಲ್ಲಿದ್ದ ಗಂಧದ ಕೊರಡನ್ನು ಹಣಮನ ತಲೆಗೆ ಒಗೆದು ಚಾಪೆಯ ಮೇಲೆ ಹೋಗಿ ಮಲಗಿದೆನು. ಹಣಮನ ತಲೆಯೊಡೆದು ರಕ್ತವು ಸುರಿಯಲಾರಂಭಿಸಿತು. ಮಕ್ಕಳೆಲ್ಲರು ಅಳತೊಡಗಿದರು. ಹೆಂಡತಿಯು ಪ್ರೈಲಿಗೆಯಾಗಿ ಹಣಮನನ್ನು ಮುಟ್ಟಿ ಅವನ ಗಾಯದ ಮೇಲೆ ಸಗಣಿಯನ್ನು ಬಡಿದು ಅದರ ಮೇಲೆ ಒದ್ದೆಯ ಅರಿವೆಯನ್ನು ಕಟ್ಟುತ್ತ ನನಗೆ ಕೇಳಬರುವಂತೆ, 'ಇನ್ನೊಮ್ಮೆ ಸಂಧ್ಯಾವಂದನೆ ಅಂದಿದ್ದರೆ ನಿನ್ನದೇನು ಗಂಟು ಹೋಗುತ್ತಿತ್ತಪ್ಪಾ. ನಿಮ್ಮ ಹಟಕ್ಕೆ ಬೇಸರ ಬಂದಿದೆ. ನಿಮ್ಮ ಮುಂದೆ ದೇವರು ನನ್ನ ಕಣ್ಣು ಎಂದು ಮುಚ್ಚುವನೋ' ಎಂದು ಗುಣುಗುಟ್ಟುತ್ತ ಹಣಮನನ್ನು ಹಾಸಿಗೆಯ ಮೇಲೆ ತಂದು ಮಲಗಿಸಿದಳು. ಮತ್ತೆ ಧಾವಳಿಯನ್ನುಟ್ಟು ಅಡುಗೆಯನ್ನು ಒಲೆಯ ಮೇಲೆ ಬಚ್ಚಿಟ್ಟು ನನ್ನೆದುರಿನಲ್ಲಿ ಗೋಡೆಗೆ ಆತುಕೊಂಡು ಹೂಬತ್ತಿ ಮಾಡುತ್ತ ಕುಳಿತಳು. ಹಸಿದ ಮಕ್ಕಳು ಹೆಂಡತಿಯ ಹತ್ತರ ಸಣ್ಣ ಮೋರೆ ಮಾಡಿಕೊಂಡು ಕುಳಿತರು. ಎಂಟು ಹತ್ತು ತಾಸು ಹೊತ್ತಾಯಿತು. ಮಗ ನರಳುತ್ತಿರುವುದನ್ನೂ ಉಳಿದವರು ಸಣ್ಣ ಮೋರೆ ಮಾಡಿಕೊಂಡು ಕುಳಿತಿರುವುದನ್ನೂ ಕಂಡು ನನಗೆ ಪಶ್ಚಾತ್ತಾಪವಾಗತೊಡಗಿತು. ನನ್ನ ಎದೆ ತುಂಬಿ ಬಂದು ಮುಸುಕಿನಲ್ಲಿಯೇ ಕಣ್ಣೀರು ಸುರಿಯಲಾರಂಭಿಸಿತು. ಹೆಂಡತಿ ಮಕ್ಕಳ ಗೋಳು ನೋಡುವುದು ನನ್ನಿಂದಾಗದಾಯಿತು. ಆದರೂ ಕಣ್ಣೊರಸಿಕೊಂಡು ಬಿಗುವಿನಿಂದ, 'ಹುಡುಗರಿಗೆ ಊಟಕ್ಕೆ ಹಾಕದೆ ಹೂಬತ್ತಿ ಮಾಡುತ್ತ ಕುಳಿತಿರುವೆಯಾ!' ಎಂದು ನುಡಿದ ಕೂಡಲೆ ಅವಳು ಥಟ್ಟನೆ ಎದ್ದು ಅಡುಗೆಯ ಮನೆಯ ಕಡೆಗೆ ಹೋದಳು. ಮಕ್ಕಳೂ ಅವಳನ್ನು ಹಿಂಬಾಲಿಸಿದರು ನಾನು ಹಣಮನೆಡೆಗೆ ಹೋಗಿ, 'ಹಣಮಾ, ನೋವು

ಹೆಚ್ಚಾಗಿದೆಯೋ?' ಎಂದು ಕೇಳಿದುದಕ್ಕೆ ಅವನು, 'ಈಗ ಕಡಿಮೆ ಯಾಗಿದೆ,' ಎಂದ ಕೂಡಲೆ ಅವನನ್ನು ಬಿಗಿದಪ್ಪಿ, 'ಹಣಮಣ್ಣಾ ಊಟಕ್ಕೆ ಏಳು,' ಎಂದು ಅವನ ಬೆನ್ನು ಚಪ್ಪರಿಸಿದೆನು. ಹಣಮನೂ ಎದ್ದು ಅಡುಗೆಯ ಮನೆಗೆ ಹೋದನು. ಮಕ್ಕಳೆಲ್ಲರು ಊಟ ಕಟ್ಟಿ ಕೊಂಡು ನದಿಗೆ ಹೋದರು. ಹೆಂಡತಿಯು ವೈದೊಳೆದು ಅಡುಗೆ ಮಾಡಿದ ಬಳಿಕ ನಮ್ಮಿರ್ವರ ಊಟವಾಯಿತು. ಹಣಮನನ್ನು ಮಗ್ಗುಲಲ್ಲಿ ಮಲಗಿಸಿಕೊಂಡು ರಾತ್ರಿಯೆಲ್ಲ ಕಳವಳಬಟ್ಟೆನು!

ನನ್ನ ಸಂಸಾರ ಬಯಲುಗಮ್ಮಾರನ ಕಮ್ಮಟ. ನನ್ನ ಬಡತನ ಶೂರ್ಪಾಲಿಯ ಹರಟೆಯ ಕಟ್ಟೆಗಳಿಗೆ ಅನ್ನವಾಯಿತು. ಮನೆಗೆ ಬರುವ ಗೆಳೆಯರು ದೂರದಲ್ಲಿಯೆ ಹಾಯತೊಡಗಿದರು. ನಾನು ನಸ್ಯ ಬಿಟ್ಟುಕೊಟ್ಟುದರಿಂದ ಅದರ ನೆವ ಮಾಡಿ ಬರುವವರೂ ಕಡಿಮೆ ಯಾದರು. ನಿರ್ಧನನಾದವನ ಸದ್ಗುಣಗಳೂ ದಾರಿದ್ರ್ಯಪಂಕದಲ್ಲಿ ಹೂತು ಹೋಗುವುವು. ನನ್ನ ಪುರಾಣಕ್ಕೂ ಜನರು ಬರುವುದು ಕಟ್ಟಾಯಿತು. ಧರ್ಮಶಾಸ್ತ್ರ ಪಂಚಾಂಗಗಳನ್ನು ಕೇಳಲಿಕ್ಕೆ ಬರು ವವರೂ ಬಯಲಾದರು. ನಾರಾಯಣನೊಬ್ಬನೇ ನನ್ನ ಜೀವದ ಗೆಳೆಯ; ಅವನೇ ನನಗೆ ಧೈರ್ಯ ಕೊಡುವವ; ಮುಂದಿನ ಮಾರ್ಗ ವನ್ನು ಸೂಚಿಸುವವ. ಆದರೂ ಅವನೇನು ಧನಿಕನೇ? ನನ್ನಂತೆಯೆ ಅಷ್ಟದರಿದ್ರ!

## ೨ ವಾಜಿಮೇಧಾಧ್ವರೋಪಾಖ್ಯಾನ

ಆಗಿಯ ವೆಚ್ಚವು ಅಗ್ನಿಯಾಗಿ ಪರಿಣಮಿಸಿದರೆ ನವರಾತ್ರಿಯ ನಂದಾದೀಪಗಳು ನನ್ನ ಹೊಟ್ಟೆಯಲ್ಲಿ ಪುಟಗೊಂಡು ಪ್ರಜ್ವಲಿಸ ತೊಡಗಿದುವು. ಎಣ್ಣೆದುಪ್ಪದ ನಂದಾದೀಪಗಳು ನಂದದೆ ಉರಿಯ ಬೇಕು; ಹತ್ತು ದಿನ ಹೋಳಿಗೆ ತುಪ್ಪ; ಬಳಿಕ ಪದ್ಮಾವತಿ ಶ್ರೀನಿವಾಸರ

ಪರಿಣಯ; ಬ್ರಾಹ್ಮಣ ಮುತ್ತೈದೆಯರ ಭೋಜನವಾಗಿ ಮೇಲೆ ದಕ್ಷಿಣೆ ಯಾಗಬೇಕು! ಈ ಖರ್ಚು ಎಲ್ಲಿಂದ ತರಬೇಕೆಂಬ ವಿಚಾರದ ಮಡುವಿನಲ್ಲಿ ಮುಳುಗಿದೆನು. ಅಷ್ಟರೊಳಗೆ ಲಾಯದಲ್ಲಿ ಕುದುರೆಯು ಹೇಕರಿಸಿತು. ಅದರ ಮಾರಾಟವೆ ತಕ್ಕ ತರಣೋಪಾಯವೆಂದು ಮನಸ್ಸಿನಲ್ಲಿ ನಿರ್ಧರಿಸಿ ಹೆಂಡತಿಗೆ ನನ್ನ ಇಂಗಿತವನ್ನು ತಿಳಿಸಿದೆನು. ಆಕೆಯು, 'ಊರಲ್ಲಿ ಎಲ್ಲರಲ್ಲಿ ಕುದುರೆಗಳೆಲ್ಲಿವೆ? ನೀರು ತರಲಿಕ್ಕೆ ನಾನಿದ್ದೇನೆ, ಹಣಮುದಮ್ಮಯರಿದ್ದಾರೆ. ಮನೆಯಲ್ಲಿ ಕುದುರೆಯನ್ನು ಕಟ್ಟಿದರೆ ಅದರ ಹೊಟ್ಟೆಗೆ ಬೇಡವೆ? ಆದುದರಿಂದ ಕುದುರೆಯನ್ನು ಮಾರಲು ಅಡ್ಡಿಯಿಲ್ಲ,' ಎಂದು ಆಕೆಯೂ ಸಮ್ಮತಿ ಕೊಟ್ಟಳು. ನಾನು, 'ನಾಳೆ ಜಂಬುಕಂಡಿಯ ಸಂತೆ. ಮುಂಜಾವಿನಲ್ಲಿ ಅಡುಗೆ ಮಾಡು. ಸಂತೆಗೆ ಹೋಗಿ ಕುದುರೆಯನ್ನು ಮಾರಿ ನವರಾತ್ರಿಯ ಸಾಮಾನಗಳನ್ನು ತರುವೆನು,' ಎಂದು ಹೇಳಿ ಆಡ್ಡಾದೆನು. ಒಮ್ಮೆಲೆ ನಿದ್ರೆ ಹತ್ತಲಿಲ್ಲ. ವಿಚಾರದಲ್ಲಿ ಮಗ್ನನಾದೆನು:— ಹೆಂಡತಿ ಮನೆಗೆಲಸ ತೀರಿಸಿಕೊಂಡು ಅಡುಗೆ ಮಾಡಬೇಕು. ಅವಳೆಷ್ಟು ನೀರು ತರಬಹುದು? ಪಾಪ ಹಣಮುದಮ್ಮಯರಿಗೆ ನೀರು ಹೊತ್ತು ಗೊತ್ತಿಲ್ಲ. ಅವರಿಂದ ನೀರಿನ ಕೆಲಸ ನೀಗಬಹುದೇ?' ಎಂಬ ಶಂಕೆಗಳಿಗೆ, 'ನದಿಯಲ್ಲಿಯೆ ಮುಸುರೆಯ ಪಾತ್ರೆಗಳನ್ನು ತಿಕ್ಕುವುದು, ಉಪಕರಣಗಳನ್ನು ತೊಳೆಯುವುದು, ಅರಿವೆಯಂಚಡಿಗಳನ್ನು ಒಗೆಯುವುದು, ಸ್ನಾನ ಮಾಡುವುದು, ಇಷ್ಟೆಲ್ಲ ಆದ ಬಳಿಕ ಮನೆಗೆಷ್ಟು ನೀರು ಹಿಡಿಯುವುದು? ನಾನೇನು ಕುಳಿತು ಮಾಡುವುದು? ನೀರಿಗೆ ಸೊಂಟಗಟ್ಟಿದರಾಯಿತು,' ಎಂದು ನಿರಸನ ಮಾಡಿದೆನು.

ಮುಂಜಾವಿನಲ್ಲಿ ಊಟವಾಗಲಿಕ್ಕೆ ನಾಲ್ಕು ತಾಸು ಹೊತ್ತೇರಿತು. ನಾನು ತಲೆಗೆ ಪಂಜೆಯನ್ನು ಕಟ್ಟಿ, ಸೊಂಟಕ್ಕೊಂದು ಬಿಗಿದು, ಮೈ ಮೇಲೆ ಹಿರಿಯರ ಗುನಿಗಡಿದ ಶಾಲು ಹೊದ್ದು, ಕುದುರೆಯನ್ನು ಲಾಯದಿಂದ ಹೊರಗೆ ತಂದೆನು. ಅದಕ್ಕೆ ಕಡಿವಾಣ ಹಾಕಿ ಹಲ್ಲಣಿಸಿ, ದೇವರಿಗೆ ನಮಸ್ಕರಿಸಿ ಹೆಂಡತಿಗೆ ಹೋಗಿ ಬರುವೆನೆಂದು ಹೇಳಿ ಹೊರಗೆ

ಬರುವಷ್ಟರಲ್ಲಿ ಮಧ್ವನು ನಾನೂ ಬರುವೆನೆಂದು ಕಾಲು ಹಿಡಿದನು. ಅವನನ್ನೆತ್ತಿ ಮುದ್ದಿಟ್ಟು ಮುಂದೆ ಸಾಗುವಷ್ಟರೊಳಗೆ ಭೀಮ ಪಮ್ಮ್ರ ಯರು, ನನ್ನ ಕೈಹಿಡಿದು, 'ಅಪ್ಪಾ, ನಮ್ಮ ಅರಿವೆ ಹರಿದಿವೆ; ಹೊಸ ಅಂಗಿ ಹೊಸ ಪತ್ತಲ ಬೇಕು; ಬರುವ ಮುಂದೆ ಮರೆಯಬೇಡ' ಎಂದು ಕೇಳಿದುದಕ್ಕೆ, 'ಖಂಡಿತವಾಗಿ ತರುವೆನು; ಸಂಜೆಗೆ ಬರುವೆನು,' ಎಂದು ಹೇಳಿ ಕುದುರೆಯ ಕಡಿವಾಣ ಹಿಡಿದು ಹೊರಡುತ್ತ,

ಯತ್ರ ಯೋಗೇಶ್ವರಃ ಕೃಷ್ಣೋ ಯತ್ರ ಪಾರ್ಥೋ ಧನುರ್ಧರಃ ।
ತತ್ರ ಶ್ರೀರ್ವಿಜಯೋ ಭೂತಿರ್ಧ್ರುವಾನೀತಿರ್ಮತಿರ್ಮಮ ॥

ಎಂಬ ಮಂತ್ರವನ್ನು ಪಠಿಸುತ್ತ ಗುಡಿಯ ಮಾರ್ಗ ಹಿಡಿದೆನು. ಕುದುರೆಯನ್ನು ಬಿದಿರಿಗೆ ಕಟ್ಟಿ ದೇವಾಲಯವನ್ನು ಹೆಬ್ಬಾಗಿಲಿನಿಂದ ಪ್ರವೇಶಿಸಿ ನರಸಿಂಹನಿಗೆ ಸಾಷ್ಟಾಂಗಪ್ರಣಿಪಾತ ಮಾಡಿ ಪ್ರದಕ್ಷಿಣೆ ಹಾಕಿ ಕುದುರೆಯನ್ನು ಹಿಡಿದು ನದಿಯಲ್ಲಿಳಿದು ಆಚೆಯ ದಂಡೆಗೆ ಹೋಗುವಾಗ,

ಜಲೇ ರಕ್ಷತು ವರಾಹಃ ಸ್ಥಲೇ ರಕ್ಷತು ವಾಮನಃ ।
ಅಟವ್ಯಾಂ ನಾರಸಿಂಹಶ್ಚ ಸರ್ವತಃ ಪಾತು ಕೇಶವಃ ॥

ಎಂದು ಜಪಿಸಿ, ಆಚೆಯ ದಡಕ್ಕೆ ಹೋಗಿ ಹಿಂದಿರುಗಿ ಗುಡಿಗೆರಗಿ ಅಶ್ವವನ್ನಾರೋಹಿಸಿದೆನು. ಕುದುರೆಯು ಮುಂದೆ ಸಾಗುತ್ತಲೆ, ಮನದಲ್ಲಿ,

ಅಗ್ರತಃ ಪೃಷ್ಠತಶ್ಚೈವ ಪಾರ್ಶ್ವತಶ್ಚ ಮಹಾಬಲೌ ।
ಆಕರ್ಣಪೂರ್ಣಧನ್ವಾನೌ ರಕ್ಷೇತಾಂ ರಾಮಲಕ್ಷ್ಮಣೌ ॥

ಎಂದು ಜಪಿಸಿದೆನು.

ಕುದುರೆಯು ಲುಟುಲುಟು ನಡೆಯುತ್ತ ಜಂಬುಕಂಡಿಯ ದಾರಿಯನ್ನು ಹಿಡಿಯಿತು. ಕುದುರೆಯ ಬೆಲೆ, ನವರಾತ್ರಿ, ಮನೆಯಲ್ಲಿ ನೀರಿನ ಕಾಲೊಳಗಾಗುವ ತೊಂದರೆ, ಇವೇ ನನ್ನ ತಲೆಯಲ್ಲಿ ತುಂಬಿಕೊಂಡಿದ್ದುವು. ಸ್ವಲ್ಪ ದೂರ ಹೋಗುವಷ್ಟರಲ್ಲಿ ಯಾರೋ ಒದರಿದ ದನಿ ಕೇಳಿಸಿದ ಹಾಗಾಯಿತು. ವಿಚಾರದಲ್ಲಿ ಮಗ್ನನಾಗಿದ್ದುದರಿಂದ

ಅತ್ತ ನನ್ನ ಲಕ್ಷ್ಯವೆ ಹೋಗಲಿಲ್ಲ. ಕೈಮಾಡುತ್ತಿರುವುದನ್ನು ಕಂಡು ಕುದುರೆಯು ಥಟ್ಟನೆ ನಿಂತಿತು. ನಾನು ಅತ್ತಿತ್ತ ನೋಡುತ್ತಲೆ ಅಕ್ಷಂತಿಯ ಅನಂತನು ಕೈಯೆತ್ತಿದುದು ಕಂಡಿತು. ಅವನು 'ಆಚಾರ್ಯರೆ, ಸಂತೆಗೆ ಹೊರಟಿರುವಿರಾ, ನವರಾತ್ರಿಯ ಸಂತೆ ಕೇಳುವುದೇನು,' ಎಂದುದಕ್ಕೆ, 'ಅನಂತಾ ಇನ್ನೂ ನಿಮ್ಮ ಉಪಹಾಸ ನಿಂತಿಲ್ಲವೆ. ಈ ಕುದುರೆಯ ಮಾರಾಟವಾದರೆ ನವರಾತ್ರಿಯ ಸಂತೆ! ಈ ಕುದುರೆಗೇನು ಬೆಲೆ ಹೇಳಬೇಕು? ಎಂದು ಕೇಳಿದೆನು. ಅನಂತನು, 'ನಾಲ್ಕೈದು ರೂಪಾಯಿ ಬರಬಹುದು. ಆದರೆ ನೀರಿಗೇನು ಹೇಳುವಿರಿ?' ಎಂದು ಪ್ರಶ್ನೆ ಮಾಡಿದುದಕ್ಕೆ ಉತ್ತರವನ್ನೀಯದೆ ನನ್ನ ಹೆಗಲು ತೋರಿಸಿ ಕುದುರೆಯನ್ನು ಮುಂದೆ ಸಾಗಿಸಿದೆನು. ದನದ ಸಂತೆಯ ಕಡೆಗೆ ನೇರವಾಗಿ ಹೋಗಿ ಒಂದು ಹುಣಸೆಯ ಮರದಡಿಯಲ್ಲಿ ಜಮಖಾನೆ ಹಾಸಿ ಅದರ ಮೇಲೆ ಹಸಿಬೆಯನ್ನಿಳುಹಿ ಕುದುರೆಯ ಕಡಿವಾಣ ಹಿಡಿದು ಗಿರಾಕಿಗಳನ್ನು ಪ್ರತೀಕ್ಷಿಸುತ್ತ ಕುಳಿತೆನು.

ಮೊದಮೊದಲು ಗಿರಾಕಿಗಳೇ ಬರಲಿಲ್ಲ. ಅದನ್ನು ಕಂಡು ಜಮಖಾನೆಯನ್ನು ಮಡಚಿ ಎದ್ದು ನಿಂತು ಸುತ್ತಣ ನಾಲ್ಕು ಜನರಿಗೆ ಕುದುರೆ ಮಾರುವುದಿದೆಯೆಂದು ತಿಳಿಸಿದೆನು. ಅವರೊಳಗಿನೊಬ್ಬನು ಮುಂದೆ ಬಂದು ಕುದುರೆಯ ಸುಳಿಗಳನ್ನು ಪರೀಕ್ಷಿಸಿದಂತೆ ನಟಿಸಿ, 'ಸ್ವಾಮಿ, ಈ ಕುದುರೆಯ ಸುಳಿ ನೆಟ್ಟಗಿಲ್ಲ. ಇದನ್ನು ಕೊಂಡವನು ದರಿದ್ರನಾಗಿ ಹಾಳಾಗಿ ಹೋಗುವನು,' ಎಂದು ನುಡಿದು ಹೊರಟು ಹೋದನು. ಸ್ವಲ್ಪ ಹೊತ್ತಿನ ಮೇಲೆ ಮತ್ತೊಬ್ಬನು ಕುದುರೆಯ ಹತ್ತಿರ ಬಂದನು. ಅವನ ಠೀವಿಯನ್ನು ನೋಡಿದರೆ ಅವನು ಕೃಷ್ಣಾ ತೀರದ ಶಾನುಭೋಗನಾಗಿರಬಹುದೆಂದು ಕಂಡಿತು. ಅವನು ಕುದುರೆಯ ಬೆನ್ನೆಲುಬು ಬರಕೆಯ ಎಲುವುಗಳನ್ನು ಅಲುಗಾಡಿಸಿ ಅದರ ಬೆಲೆ ಕೇಳಿದನು. ನಾನು ಹತ್ತು ರೂಪಾಯಿ ಹೇಳಿದೆನು. ಅವನು ಗಂಭೀರ ಮುದ್ರೆಯಿಂದ, 'ಆಚಾರ್ಯರೆ, ಕುದುರೆ ಚೆನ್ನಾಗಿದೆ. ಬಹಳ ಕಷ್ಟಬಟ್ಟು ಮೇಯಿಸಿದಂತೆ ತೋರುತ್ತದೆ. ಜೀವದಿಂದಿರುವಾಗಲೆ

ವ್ಯೆಯೆಲುಬುಗಳ ಲೆಕ್ಕ ಹತ್ತಬೇಕೆಂದು ದಕ್ಷತೆಯಿಂದ ಸಾಕಿದಂತೆ ತೋರುತ್ತದೆ ಇದನ್ನು ಇಲ್ಲಿಯ ದನದ ದವಾಖಾನೆಗೆ ಒಯ್ದರೆ ಅಶ್ವಶಾಸ್ತ್ರವನ್ನಭ್ಯಾಸಿಸುವ ಡಾಕ್ಟರರು ನಿಮಗೆ ಹತ್ತು ರೂಪಾಯಿ ಕೊಡಬಹುದು. ಅಂತಹರಿಗೆ ಇಂತಹ ಅಪರೂಪ ಪ್ರಾಣಿಗಳ ಆವಶ್ಯಕತೆ ಹೆಚ್ಚು!' ಎಂದು ಮುಗುಳು ನಗೆ ನಗುತ್ತಿರಲು ನಾನು 'ಕುದುರೆಯು ಮುಂಕಣಿಗೆ ಗಟ್ಟಿಯಾಗಿದೆ,' ಎಂದು ನುಡಿದೆನು. ಅದನ್ನು ಲೆಕ್ಕಿಸದೆ ಅವನು ಮೋರೆ ತಿರುವಿ ಕಾಲು ತೆಗೆದನು. ಆ ಮೇಲೆ ಮತ್ತೊಬ್ಬನು ಕುದುರೆಯ ಕಡೆಗೆ ನೋಡುತ್ತ ನನ್ನೆಡೆಗೆ ಬರುತ್ತಿರುವುದನ್ನು ಕಂಡು ಅವನು ಬಳಿಗಾರನೆಂದು ಬಗೆದು 'ಕುದುರೆಯು ಸಭ್ಯವಿದೆ. ಹತ್ತಲಿಕ್ಕೆ ಚೆನ್ನಾಗಿದೆ. ಬೆಲೆ ಎಂಟೇ ರೂಪಾಯಿ,' ಎಂದೆನು. ಅದನ್ನು ಕೇಳಿ ಅವನು ಕುದುರೆಯ ಮುಖವನ್ನು ಮೇಲಕ್ಕೆತ್ತಿ ಹಲ್ಲು ಪರೀಕ್ಷಿಸಿ, ಕಣ್ಣು ನೋಡಿ, ಸ್ವಲ್ಪ ನಡೆಯಿಸಿ, ಬಳಿಕ ದೂರದಲ್ಲಿ ನಿಂತು ಇಡೀ ಕುದುರೆಯನ್ನೇ ನಿರೀಕ್ಷಿಸಿ, 'ಅಯ್ಯಾ, ಇದರ ಬಲಗಣ್ಣು ಕೆಟ್ಟಿದೆ. ಹಿಂಗಾಲು ಒಂದಕ್ಕೊಂದು ತೊಡಕು ಹಾಕುತ್ತವೆ. ಯಾವನಾದರೊಬ್ಬ ಪಂಢರಪುರದ ವಾರಕರಿಗೆ ಮಾರಿದರೆ ಅಷ್ಟು ಬೆಲೆ ಬರಬಹುದು. ಆ ತಾಳಕುಟಗನಿಗೆ ಕುದುರೆಯೂ ಹಿಂಗಾಲುಗಳ ಚಪ್ಪಳೆಯಿಂದ 'ವಿಟ್ಠಲ,' ವಿಟ್ಠಲ, ಎಂದು ತಾಲಕೊಡುವುದು' ಎಂದು ಗಹಗಹಿಸಿ ನಕ್ಕು ನಿಂತುಬಿಟ್ಟನು. ಬಂದ ಗಿರಾಕಿಗಳೆಲ್ಲ ಒಂದಿಲ್ಲೊಂದು ಕುಂದುಕೊರತೆ ತೆಗೆದು ಹೊರಟುಹೋದರು. ಹೀಗಾಗಿ ಆ ಕುದುರೆಯ ಯಜಮಾನನು ನಾನೇ ಎಂದು ಹೇಳಲಿಕ್ಕೆ ತುಂಬ ನಾಚಿಕೆ ಬರತೊಡಗಿತು.

ಸಂಜೆಯಾಗ ಬಂದಿತು. ಸಂತೆಗೆ ಬಂದವರು ಒಬ್ಬೊಬ್ಬರು ಹೊರಡಹತ್ತಿದರು. ಆದರೂ ಮಾರಾಟ ಮಾಡಿಕೊಂಡೇ ತೀರಬೇಕೆಂದು ನಿರ್ಧರಿಸಿ ನಿಂತೆನು. ಕೊನೆಗೆ ತುರುಷ್ಕನೊಬ್ಬನು ಬಂದು ಕುದುರೆಯ ಬೆಲೆ ಕೇಳಿದನು. ನಾನು ಆರು ರೂಪಾಯಿ ಹೇಳಿದೆನು. ಅವನು, 'ಸ್ವಾಮಿ, ಒಂದು ಮಾತು ಕೇಳುತ್ತೇನೆ. ಅಹುದಾದರ ಹುದೆನ್ನಿ, ಇಲ್ಲವಾದರಿಲ್ಲವೆನ್ನಿ. ಐದು ರೂಪಾಯಿ ಕೊಡುತ್ತೇನೆ,'

ಎಂದನು. ನಾನು ಸ್ವಲ್ಪ ಅರೆದಾಡಿ ಐದು ರೂಪಾಯಿಗೆ ಒಪ್ಪಿಗೆಯಿತ್ತೆನು. ಹತ್ತರಿದ್ದ ದನದ ಚೀಟಿಯನ್ನು ಕೊಟ್ಟು ರೂಪಾಯಿ ಬೇಡಿದೆನು. 'ಪಾವತಿಯನ್ನು ಬರೆಯಿರಿ ಹಣಕೊಡುವೆನು,' ಎಂದುದಕ್ಕೆ ಪಾವತಿಯನ್ನು ಬರೆದು ಸಹಿ ಮಾಡಿಕೊಟ್ಟೆನು. ತುರುಷ್ಕನು, 'ಸ್ವಾಮೀ, ಕುದುರೆಯನ್ನು ನನ್ನ ತಮ್ಮನ ಕೈಯೊಳಗೆ ಕೊಟ್ಟು ಬಿಡಿ; ನಮ್ಮ ಅಂಗಡಿಯಲ್ಲಿ ನಿಮಗೆ ರೂಪಾಯಿ ಕೊಡುವೆನು ಬನ್ನಿ,' ಎಂದೊಡನೆ ಹಸಿಬೆ ಹೊತ್ತುಕೊಂಡು ಅವನೊಡನೆ ಊರಲ್ಲಿ ಹೋಗಿ, ಒಂದೆರಡು ಬೀದಿಗಳನ್ನು ಸುತ್ತಿ ಒಂದು ಅಂಗಡಿಯ ಹತ್ತರ ಬರಲು ಅವನು, 'ಇಲ್ಲಿಯೆ ನಿಲ್ಲಿರಿ; ಇದೇ ಈಗ ರೂಪಾಯಿ ತರುವೆನು,' ಎಂದು ನನ್ನನ್ನು ಅಲ್ಲಿ ನಿಲ್ಲಿಸಿ ಹೋದವನು ಅರ್ಧತಾಸು ರಾತ್ರಿಯಾದರೂ ತಿರುಗಿ ಬರಲಿಲ್ಲ. ಮೋಸವಾಯಿತೆಂದು ಗಾಬರಿಯಾಗಿ ಹತ್ತರಿದ್ದ ಅಂಗಡಿಗಳಲ್ಲಿ ಆ ತುರುಷ್ಕನ ಬಗ್ಗೆ ವಿಚಾರಿಸಿದೆನು. ಅಲ್ಲಿ ಅವನ ಸಮಾಚಾರ ತಿಳಿಯಲಿಲ್ಲ. ಲಗುಬಗೆಯಿಂದ ಕುದುರೆಯ ಕಡೆಗೆ ಓಡಿಹೋದೆನು. ಅಲ್ಲಿ ಕುದುರೆಯಿರಲಿಲ್ಲ; ಯಾರೂ ಇರಲಿಲ್ಲ! ಬಳಿಕ ಫೌಜದಾರರ ಕಚೇರಿಗೆ ನೇರವಾಗಿ ಹೋಗಿ ದೂರು ಹೇಳಿದೆನು. ಫೌಜದಾರರು, 'ಇಂತಹ ಮೋಸಗಳು ಊರೊಳಗೆ ಬಹಳವಾಗಹತ್ತಿವೆ. ಆಚಾರ್ಯರೆ, ಹಣ ತೆಗೆದುಕೊಂಡು ಕುದುರೆಯನ್ನು ಒಪ್ಪಿಸಬೇಕಾಗಿತ್ತು.' ಎಂದು ನುಡಿದು, ನನ್ನ ಹೆಸರು ವಿಳಾಸಗಳೇನೆಂದು ಕೇಳಿ ಬರೆದುಕೊಂಡ ಬಳಿಕ ಕುದುರೆಯ ಚಿಹ್ನ ಕೇಳಿದ ಕೂಡಲೆ ನಾನು, 'ನಸ್ಯದ ಬಣ್ಣದ ಕುದುರೆ; ಬಲಗಣ್ಣು ಲೋಪ; ಹಿಂದಿನ ಕಾಲು ಒಂದಕ್ಕೊಂದು ತೊಡಕುಹಾಕುತ್ತವೆ; ಪ್ರಾಣಿ ಕೊಂಚ ಬಡಕ,' ಎಂದು ಹೇಳಿದುದನ್ನು ಮುಗುಳುನಗೆಯಿಂದ ಬರೆದುಕೊಳ್ಳುತ್ತ ಅವರು ತುರುಷ್ಕನ ಹೆಸರು ಕೇಳಿದರು. ನನಗೆ ಗೊತ್ತಿಲ್ಲವೆಂದು ಹೇಳಿದೆನು. 'ಇಲ್ಲವಾದರೆ, ಅವನ ವರ್ಣನೆಯನ್ನಾದರೂ ಕೊಡುವಿರಾ?' ಎಂದು ಕೇಳಲು, 'ತುರುಕನು ಚಲ್ಲಣ ಹಾಕಿದ್ದಾನೆ; ಮೈಯಲ್ಲಿ ಬಿಳಿಯ ಸದರವಿದೆ; ಅದರ ಮೇಲೆ ಕಬಚೆಯಿದೆ;

ತಲೆಗೆ ಪಟಕ ಸುತ್ತಿದ್ದಾನೆ; ಕಾಲಲ್ಲಿ ಚಪಾವು ಮೆಟ್ಟಿದ್ದಾನೆ,' ಎಂದು ಉತ್ತರ ಕೊಟ್ಟೆನು. ಫೌಜದಾರರು, 'ಆಚಾರ್ಯರೆ, ಇಲ್ಲಿಯ ಮುಸಲ್ಮಾನರೆಲ್ಲ ಸುಮಾರಾಗಿ ಇಂತಹ ವೇಷವನ್ನೇ ಧರಿಸುವರು. ಅವನ ಮೋರೆಯ ಲಕ್ಷಣವನ್ನು ಹೇಳಬಲ್ಲಿರಾ?' ಎಂದುದಕ್ಕೆ ನಾನು, 'ರಾಯರೇ, ತಮಗೆ ಗೋಃಸಾಸ್ನಾದಿಮತ್ತ್ವದಂತೆ ಅಸಾಧಾರಣಧರ್ಮವು ಬೇಕಾಗಿದೆಯಲ್ಲವೆ?' ಎಂದು ಕೇಳಿ ಸ್ವಲ್ಪ ವಿಚಾರಿಸಿ, 'ಗಡ್ಡವಿದೆ' ಎಂದು ನುಡಿದೆನು. ಫೌಜದಾರರು ನಕ್ಕು, 'ನಾಳೆ ಮುಂಜಾವಿನಲ್ಲಿ ಬನ್ನಿ. ಎಲ್ಲ ವಿಷಯವನ್ನು ರಾತ್ರಿ ವಿಚಾರಿಸುತ್ತೇನೆ.' ಎಂದು ಆಶ್ವಾಸನವನ್ನಿತ್ತು ನನ್ನನ್ನು ಕಳುಹಿಕೊಟ್ಟರು. ನಾನು ಮುಮ್ಮಲ ಮರುಗುತ್ತ ವೆಂಕಟರಮಣನ ಗುಡಿಗೆ ಹೋದೆನು. ಅಲ್ಲಿ ಸಂಧ್ಯಾವಂದನೆ ಮುಗಿಸಿ ಹಸಿದೆಯಲ್ಲಿ ತಂದಿದ್ದ ಅರಳ ಹಿಟ್ಟಿನಲ್ಲಿ ಬೆಲ್ಲ ಬೆರಿಸಿ ತಿಂದು, ಮೇಲೆ ಒಂದು ತಂಬಿಗೆ ನೀರು ಗಟಗಟ ಕುಡಿದು, ಜಮಖಾನೆಯನ್ನು ಹಾಸಿ ಅಡ್ಡಾಗಿ,

ಅಗಸ್ತ್ಯಂ ಕುಂಭಕರ್ಣಂ ಚ ಶೈದ್ಯಂ ಚ ವಡವಾನಲಂ ।
ಆಹಾರಪರಿಪಾಕಾರ್ಥಂ ಸ್ಮರಾಮಿ ಚ ವೃಕೋದರಂ ॥

ಎಂಬ ಮಂತ್ರವನ್ನು ಉಚ್ಚರಿಸಿ, 'ವೃಕೋದರ, ವೃಕೋದರ, ವೃಕೋದರ' ಎಂದು ಮೂರು ಬಾರಿ ಹೊಟ್ಟೆಯ ಮೇಲೆ ಕೈಯಾಡಿಸಿ ನಿದ್ರೆಮಾಡಲೆತ್ನಿಸಿದೆನು.

ಚಿಂತೆ ನಿದ್ರೆಗೆ ಹಗೆಯಾಗಿದೆ. ನವರಾತ್ರಿ, ಮನೆಯ ನೀರುನಿಡಿ, ಇವುಗಳ ಚಿಂತೆಗೀಡಾಗಿ ಹುಣ್ಣಾದ ನಮ್ಮ ಹೃದಯಕ್ಕೆ ಮೋಸದ ಬರೆ ಕೊಟ್ಟ ಬಳಿಕ ನಿದ್ರೆ ಬರುವುದು ಹೇಗೆ? ದಣಿವು ನಿದ್ದೆಗೆ ಮದ್ದಾಗಿರುವುದರಿಂದ ಮಲಗಿಕೊಂಡೆನು. ಬೆಳಗಾಗುತ್ತಲೆ ಎದ್ದು ಕಚೇರಿಗೆ ಹೋದೆನು. ಫೌಜದಾರರು ಎರಡು ತಾಸು ಹೊತ್ತೇರಿದ ಬಳಿಕ ಬಂದು, 'ಆಚಾರ್ಯರೆ, ನಿಮ್ಮ ಕುದುರೆ ಮದರಕಂಡಿಯ ಮಾರ್ಗವಾಗಿ ಹೋಗಿರುವುದೆಂದು ತಿಳಿಯುತ್ತದೆ. ದಿವಸೆರಡು ದಿವಸಗಳಲ್ಲಿ ಅದನ್ನು ಗೊತ್ತುಹಚ್ಚುವೆನು' ಎಂದು ನುಡಿದು ನನ್ನ ಸ್ಥಿತಿಗತಿ ಕೇಳಿಕೊಂಡು ಕನಿಕರಬಟ್ಟು ನನ್ನ

ಕೈಯಲ್ಲಿ ಎರಡು ರೂಪಾಯಿ ಇಟ್ಟರು. ನಾನು ಅವರಿಗೆ ಆಶೀರ್ವದಿಸಿ ಪೇಟೆಗೆ ಹೋಗಿ ಎರಡೇ ರೂಪಾಯಿಗಳಲ್ಲಿ ಅವಶ್ಯಕವಾದ ಪದಾರ್ಥಗಳನ್ನು ಕೊಂಡುಕೊಂಡು ಶೂರ್ಪಾಲಿಯ ದಾರಿಯನ್ನು ಹಿಡಿದೆನು.

ಹೊಳೆ ಮುಟ್ಟಲಿಕ್ಕೆ ಹೊತ್ತಾಯಿತು. ಸ್ನಾನ ಮಾಡುತ್ತಿದ್ದ ಒಬ್ಬಿಬ್ಬರು, 'ಆಚಾರ್ಯರೇ, ಬಿಸಿಲು ಮಾಡಿಕೊಂಡು ಬಂದಿರಿ?' ಎಂದುದಕ್ಕೆ ಉತ್ತರ ಕೊಡದೆ ಮುಂದೆ ಸಾಗುವಷ್ಟರಲ್ಲಿ ಹೆಂಡತಿಯು ಒಗೆದ ವಸ್ತ್ರಗಳ ಸಿಂಬೆಯನ್ನು ತಲೆಯ ಮೇಲಿರಿಸಿ, ಅದರ ಮೇಲೆ ಆಗ್ರೋದಕದ ಪಾತ್ರೆಗಳನ್ನು ಒಂದರ ಮೇಲೊಂದಿಟ್ಟು ದೊಡ್ಡ ಕೊಡ ಸೊಂಟದ ಮೇಲಿಟ್ಟುಕೊಂಡು ಹೋಗುತ್ತಿರುವುದು ಕಂಡಿತು. ಹಣಮನು ದೋತ್ರಗಳನ್ನು ಒಂದು ಹೆಗಲ ಮೇಲೆ ಹಾಕಿ ಮತ್ತೊಂದರ ಮೇಲೆ ನೀರಿನ ಕೊಡ ಒಯ್ಯುತ್ತಿದ್ದನು. ದಮ್ಮಿಯು ಟೊಂಕದ ಮೇಲೆ ಬಿಂದಿಗೆಯನ್ನಿಟ್ಟುಕೊಂಡು ತೇಕುತ್ತ ಹಣಮನನ್ನು ಹಿಂಬಾಲಿಸಿ ನಡೆದಿದ್ದಳು. ಆ ದೃಶ್ಯವನ್ನು ಕಂಡು ನನ್ನ ಎದೆ ಕರಗಿತು. ಮಕ್ಕಳ ಹೊರೆಯನ್ನಿಳುಹಬೇಕೋ ಹೆಂಡತಿಯ ಭಾರವನ್ನು ಕಡಿಮೆ ಮಾಡಬೇಕೋ ಎಂದು ಹಾತೊರೆದು ಮುಂದುವರಿದೆನು. ಅವರು ಮಡಿಯಿಂದ ನೀರೊಯ್ಯುತ್ತಿರುವುದನ್ನು ಮನಗಂಡು ಅವರ ಹಿಂದಿನಿಂದಲೆ ಸಾಗಿ ಮನೆ ಸೇರಿಕೊಂಡೆನು. ಭೀಮಪಮ್ಮಿಯರು ಮುಂದೆ ಬಂದು 'ಅಪ್ಪಾ, ಹೊಸ ಅರಿವೆಗಳನ್ನು ತಂದಿರುವೆಯಾ?' ಎಂದುದಕ್ಕೆ ತಲೆಯಲ್ಲಾಡಿಸಿ ಹಸಿಬೆ ಇಳಿಸಿದೆನು. ಹಣಮನು ಕೊಡ ಇಟ್ಟು ಬಂದು, 'ಅಪ್ಪಾ, ಬಿಸಿಲಾಯಿತು, ದಣಿದು ಬಂದಿರುವಿರಿ. ನಾನು ಪೂಜೆ ಮಾಡುತ್ತೇನೆ. ಸಾವಕಾಶವಾಗಿ ಸ್ನಾನ ಮಾಡಿ ಬನ್ನಿರಿ,' ಎಂದನು. ಹೆಂಡತಿಯು ನಸುನಗುತ್ತ, 'ಬಿಸಿಲಾಯಿತು,' ಎಂದು ನುಡಿದು ಒಂದು ತಂಬಿಗೆ ನೀರು ಕಾಲು ತೊಳೆಯಲಿಕ್ಕೆ ಇಟ್ಟಳು. ನನ್ನ ಹೊಟ್ಟೆಯೊಳಗಿನ ಕಷ್ಟನಷ್ಟಗಳ ಕುದಿಯು ಕಡಿಮೆಯಾಯಿತು. ಪದುಳನ ಮಾತುಕತೆಗಳು ಅಮೃತಮಯವಾಗಿವೆ! ವನ್ನೀ ಅಶ್ವಮೇಧದ ಕತೆಯನ್ನು ಹೆಂಡತಿಗೆ ಒಂದುಗಡೆಗೆ ಹೇಳಿದೆನು.

## ೩ ದಮಯಂತೀ ಉಪಾಖ್ಯಾನ

ಒಂದು ದಿನ ರಾತ್ರಿ ಬೇಸಿಗೆಯ ಬೆಳದಿಂಗಳಲ್ಲಿ ಕಟ್ಟೆಯ ಮೇಲೆ ಗಾಳಿಗೆ ಮೈಯೊಡ್ಡಿ ನಾನೂ ನಾರಾಯಣನೂ ಹರಟೆ ಹೊಡೆಯುತ್ತ ಕುಳಿತಿದ್ದೆವು. ಹೆಂಡತಿಯೂ ಹೆಬ್ಬಾಗಿಲದ ಸುಳಿಯಲ್ಲಿ ನಿಂತು ಆದರಲ್ಲಿ ಭಾಗ ವಹಿಸಿದ್ದಳು. ಆ ದಿನ ದಾಹವು ಹೆಚ್ಚಾಗಿದ್ದುದರಿಂದ ನಾರಾಯಣನು ಕುಡಿಯಲಿಕ್ಕೆ ನೀರು ಬೇಡಿದನು. ದಮ್ಮಿಯು ನೀರಿನ ತಂಬಿಗೆ ಥಾಲಿಗಳನ್ನು ಅವನ ಮುಂದಿರಿಸಿದಳು. ಆಕೆಯನ್ನು ನೋಡಿ,

ನಾರಾಯಣನು—ಆಚಾರ್ಯರೆ, ಮಗಳು ಮದುವೆಗೆ ಬಂದಿರುವಳು. ವರ ನೋಡಿರುವಿರೋ?

ನಾನು—ಎಲ್ಲಿಯ ವರ. ಹೊಟ್ಟೆಯ ವಿವಂಚನೆಯಲ್ಲಿ ಬಿದ್ದ ನನಗೆ ಮಿಕ್ಕ ವಿಚಾರವೆಲ್ಲಿ? ಮದುವೆಯ ಮಾತು ತೆಗೆದ ಕೂಡಲೆ ವೆಚ್ಚದ ಭೂತವು ಎದುರಿಗೆ ಬಂದು ನಿಲ್ಲುತ್ತದೆ. ಅದಕ್ಕಂಜಿ ನಾನು ಮದುವೆಯ ವಿಚಾರವನ್ನೇ ಮಾಡಿಲ್ಲ.

ನಾ—ದಮ್ಮಿಗೆ ಯೋಗ್ಯ ವರ ದೊರೆತರೆ ಮದುವೆ ಮಾಡುವಿರಾ?

ಹೆಂಡತಿ—ಆಚಾರ್ಯರೆ, ದಮ್ಮಿಗೆ ತಕ್ಕ ವರ ಸಿಕ್ಕರೆ ಮದುವೆ ಮಾಡಲಿಕ್ಕೆ ಏನು ಅಡ್ಡಿಯಿದೆ? ವರ ಚಿಕ್ಕವ ಇರಬೇಕು; ಮನೆಯಲ್ಲಿ ಅತ್ತೆ ಮಾವ ಇವರ ಕಾಟ ಇರಬಾರದು; ಮಗಳ ಮೈ ಮೇಲೆ ಗೋಟು ಪಾಟಲಿ ಸರಿಗೆ ಬಂಗಾರದ ಪಟ್ಟೆ ಹಾಕುವವರು ಇರಬೇಕು. ದಮ್ಮಿಗೆ ನೀರು ಹೊರುವುದು ಆಗುವುದಿಲ್ಲ. ಅತ್ತೆಯ ಮನೆ ಬೆಳಗಾವಿಯಂತಹ ಊರೊಳಗೆ ಇರಬೇಕು.

ನಾನು—ಮತ್ತೇನೇನು ಇರಬೇಕೆಂಬುದನ್ನು ಈಗಲೇ ಹೇಳಿಬಿಡು. ನಾರಾಯಣನು ಎಲ್ಲಿಯಾದರೂ ಮರೆತಾನು? ನಾರಾಯಣಾ, ಹೆಂಗಸರ ಹುಚ್ಚು ಕಡೆತನಕ ಬಿಡುವುದಿಲ್ಲ ನೋಡು. ಅವಳನ್ನುವಂತಹ ವರ ದೊರೆಯಬೇಕಾದರೆ ಕನಿಷ್ಟ ಪಕ್ಷಕ್ಕೆ ಸಾವಿರ ರೂಪಾಯಿ ವರ

ದಕ್ಷಿಣೆ ಬೇಕು. ಮೇಲೆ ಲಗ್ನದ ಖರ್ಚು. ಅಷ್ಟು ಹಣವನ್ನು ಅವಳ ಮನೆಯವರು ತಂದು ಕೊಡುವರೋ? ಬೆಳಗಾವಿ ಧಾರವಾಡಗಳ ವಿಷಯ ಅವಳಿಗೆ ಗೊತ್ತಿಲ್ಲ. ಅಲ್ಲಿ ವರ ಬಹಳ ತುಟ್ಟಿ.

ನಾರಾ—ಹಾಗೆನ್ನಬೇಡಿ. ನಿಮ್ಮ ಮಗಳ ದೈವವಿದ್ದರೆ ಎಲ್ಲವೂ ಕೈಗೂಡುವುದು.

ನಾ—ನನ್ನ ದೈವದಂತೆ ನನ್ನ ಮಗಳ ದೈವ!

ಹೆಂ—ನಾರಾಯಣಾಚಾರ್ಯರೆ, ದಮ್ಮಿಗೇನಾಗಿದೆ? ಅವಳ ಮೋರೆಯ ಮೇಲೆ ಕಳೆ ಎಷ್ಟು, ಕಾಂತಿ ಎಷ್ಟು. ಮೊನ್ನೆ ಆಗಿಯ ಹಬ್ಬದಲ್ಲಿ ಬಂದ ಜಂಬುಕಂಡಿಯುವರು ದಮ್ಮಿಯನ್ನು ನೋಡಿ, 'ಈ ಕನ್ಯೆ ಯಾರವಳು; ಎಷ್ಟು ಚೆಲುವೆಯಾಗಿದ್ದಾಳೆ; ಒಳ್ಳೆ ಲಕ್ಷಣವಂತಿ,' ಎಂದು ಅಂದುವನ್ನು ನಾನೇ ಕೇಳಿದ್ದೇನೆ. ಈ ಊರಲ್ಲಿ ದಮ್ಮಿಯಂತಹ ಕನ್ಯೆ ತೋರಿಸಿರಿ. ಅವಳನ್ನು ಕಂಡು ಯಾರಾದರು ಮದುವೆ ಮಾಡಿಕೊಳ್ಳಬಹುದು.

ನಾ—ಸುಮ್ಮನಿರು; ಅವರವರ ಮಕ್ಕಳು ತಾಯಿ ತಂದೆಗಳಿಗೆ ಚೆಲುವರು. ಗುಂಗಿಯ ಹುಳವು ತನ್ನ ಮಗುವಿಗೆ ಗಂಗಾಧರನೆಂದು ತಿಳಿಯುತ್ತದಂತೆ.

ನಾರಾ—ಬಡವರಾಗಲಿ, ಸಿರಿವಂತರಾಗಲಿ, ಹೆಣ್ಣು ಮಕ್ಕಳು ಸುರೂಪಿಗಳಾಗಿರಲಿ ಕುರೂಪಿಗಳಾಗಿರಲಿ, ಅವರ ಲಗ್ನವನ್ನು ತೀರಿಸಲೇಬೇಕು.

ನಾ—ಯೋಗ್ಯ ಸ್ಥಳ ಸಿಕ್ಕರೆ ದಮ್ಮಿಯ ಮದುವೆಯನ್ನು ಮಾಡಿಬಿಡುವಾ. ನಿನಗೆ ಎಷ್ಟೋ ವರಗಳು ಗೊತ್ತಿವೆ. ಒಂದೆರಡು ನಮಗೆ ತೂಗುವಂತಹ ಸ್ಥಳಗಳನ್ನು ಹೇಳು ನೋಡವಾ?

ನಾರಾ—ನಾಳೆ ಪ್ರಾತಃಕಾಲ ಸ್ಥಳ ಹೇಳುತ್ತೇನೆ. ಕನ್ಯೆಯ ನಕ್ಷತ್ರ ಮೊದಲಾದುವುಗಳನ್ನು ಬರೆದು ಕೊಡಿರಿ. ಕೂಡಿ ಬಂದರೆ ಹೋಳಿಗೆಯನ್ನೆಬ್ಬಿಸಿ ಬಿಡೋಣ.

ನಾರಾಯಣನು ಟಿಪ್ಪಣಿ ತೆಗೆದುಕೊಂಡು ಮನೆಗೆ ಹೊರಟು ಹೋದನು.

ಹೆಂ—ನಾರಾಯಣಾಚಾರ್ಯರು ನಮ್ಮ ವಿಷಯದಲ್ಲಿ ನಗೆಚಾಟ ಮಾಡುವವರಲ್ಲ. ಸಂಚಾರ ಮಾಡುವಾಗ ಎಲ್ಲಿಯೊ ದಮ್ಮಿಗೆ ವರ ನೋಡಿಕೊಂಡು ಬಂದಿರಬಹುದು.

ನಾ—ಹಾಗಿದ್ದರೆ ಇಲ್ಲಿಯೆ ತಾನೆ ಸ್ಥಳ ಹೇಳಲಿಕ್ಕೆ ಏತರ ಅಡ್ಡಿಯಿದ್ದಿತು. ಏನೋ, ಎಂತೋ, ಹರಟೆಯೊಳಗಿನ ಮಾತು !

ಹೆಂ—ವರ ಗೊತ್ತಾದರೆ ನಿಮ್ಮ ಸಿದ್ಧತೆ ಇದೆಯೊ, ಇಲ್ಲವೊ ?

ನಾ—ಸಿದ್ಧತೆ ಎಂತಹದು ? ನನ್ನ ಹೊಲವಿದೆ ! ಸಾವುಕಾರರಿದ್ದಾರೆ ! ಸಾಲ ತೆಗೆಯದೆ ಗತ್ಯಂತರವಿಲ್ಲ. ಪ್ಯೆದೊಯ್ಯುವ ವರೆಗೆ ಮಳೆಯ ಅಂಜಿಕೆ; ತೊಯ್ದ ಬಳಿಕ ಅವರ ಅಂಜಿಕೆಯೆಂತಹದು ! ಭೀಮನ ಉಪನಯನವೂ ಆಗಬೇಕಾಗಿದೆ. ಮದುವೆಮುಂಜಿವೆಗಳನ್ನು ಮುಗಿಸಿ, ' ಉಧೋ ಲಕ್ಷ್ಮಣ ' ಎಂದು ತಲೆಗೆ ತಟ್ಟು ಹಾಕಿ ಊರು ಬಿಟ್ಟು ಹೊರಟು ಹೋದರಾಯಿತು; ಭಿಕ್ಷಾಪತಿ ಲಕ್ಷಪತಿ !

ಈ ನನ್ನ ಮಾತು ಕೇಳಿ ಹೆಂಡತಿಯು ಏನೂ ಮಾತಾಡದೆ ಒಳಗೆ ಹೋಗಿಬಿಟ್ಟಳು.

ನಾರಾಯಣನು ಮೂರು ನಾಲ್ಕು ತಾಸು ಹೊತ್ತಾದ ಬಳಿಕ ಬಂದನು. ಅದನ್ನು ಕಂಡು ಹೆಂಡತಿಯು ಅಡುಗೆ ಬಿಟ್ಟು ಹೊರಗೆ ಬಂದಳು.

ನಾರಾ—ಆಚಾರ್ಯರೆ, ಕಟ್ಟೆಯಮನೆ ಕೃಷ್ಣಾಚಾರ್ಯರ ಮಗ ವ್ಯಾಸನೇ ನಾನು ಹೇಳುವ ವರ. ಕೃಷ್ಣಾಚಾರ್ಯರ ಪ್ರಕೃತಿ ಕ್ಷೀಣವಾಗುತ್ತ ನಡೆದಿದೆ. ಮಗನ ಮದುವೆ ನೋಡಬೇಕೆಂದು ಆಶೆ ಪಡುತ್ತಿದ್ದಾರೆ. ಎಲ್ಲಿಯಾದರು ಒಳ್ಳೆಯವರ ಮಗಳನ್ನು ಗಂಟು ಹಾಕೆಂದು ನನಗೆ ಹೇಳಿರುವರು. ಈ ಮೊದಲೇ ನಾನು ನಿಮ್ಮ ಕನ್ಯೆ ಚೆನ್ನಾಗಿರುವಳೆಂದು ಹೇಳಿ, ನರಸಿಂಹಾಚಾರ್ಯರು ಬಡವರಾಗಿದ್ದರೂ ಮನೆತನಸ್ಥರು

ಒಳ್ಳೆಯವರೆಂದು ಸೂಚಿಸಿದ್ದೆನು. ಆದುದರಿಂದ ಕನ್ಯೆಯ ಗೋತ್ರ ನಕ್ಷತ್ರಗಳನ್ನು ಒಯ್ದು ಅವು ಕೂಡಿ ಬರುತ್ತವೆಂದು ಅವರಿಗೆ ತೋರಿಸಿ ದೆನು. ಕೃಷ್ಣಾಚಾರ್ಯರು ನಿಮ್ಮ ಮಗಳನ್ನು ತಮ್ಮ ಮಗನಿಗೆ ಮಾಡಿ ಕೊಳ್ಳಲಿಕ್ಕೆ ಸಿದ್ಧರಿದ್ದಾರೆ. ಕನ್ಯೆ ಅವರ ಹೆಂಡತಿಗೆ ಹೆಚ್ಚಾಗಿ ಮನಸ್ಸಿಗೆ ಬಂದಿದ್ದಾಳೆ. ಇಕ್ಕೊಳ್ಳಿ, ವರನ ಗೋತ್ರ ನಕ್ಷತ್ರಗಳು.

ಎಂದಂದು ನನ್ನ ಕೈಯಲ್ಲಿ ಟಿಪ್ಪಣಿಯಿಟ್ಟನು. ನಾನೂ ಪಂಚಾಂಗತೆಗೆದು ಗೋತ್ರ ನಕ್ಷತ್ರ ಗುಣಗಳು ಕೂಡಿಬರುತ್ತವೆಂಬು ದನ್ನು ಕಂಡುಹಿಡಿದೆನು.

ಹೆಂ— ನಾರಾಯಣಾಚಾರ್ಯರೆ ಜೀವೂಬಾಯಿಯವರು ನದಿಯ ಮೇಲೆ ಆಗಾಗ್ಗೆ ದಮ್ಮಿಯನ್ನು ಮಾತಾಡಿಸುತ್ತಾರೆ. ಆಕೆಯು ನೀರಿಗೆ ದೊಡ್ಡ ಕೊಪ ಒಯ್ದಿದ್ದರೆ ಅದನ್ನೆತ್ತಿ ಅವಳ ತಲೆಯಮೇಲೆ ಇಡುತ್ತಾರೆ. ಅದರ ಕಾರಣ ಈಗ ತಿಳಿಯಿತು. ವ್ಯಾಸನು ಊರಲ್ಲಿ ಕಾಣುವುದಿಲ್ಲ. ಎಲ್ಲಿ ಹೋಗಿದ್ದಾನೆ? ಎಲ್ಲಿಯಾದರು ಕೆಲಸ ಹಿಡಿದಿರು ವನೋ? ಮೊನ್ನೆ ಆಗಿಯ ಹಬ್ಬದಲ್ಲಿ ಒಂದು ದಿನ ನಾನೂ ದಮ್ಮಿಯೂ ನಮ್ಮ ಕಟ್ಟೆಯ ಮೇಲೆ ನಿಂತಾಗ ವ್ಯಾಸನು ಮೋರೆ ಕೆಳಗೆ ಮಾಡಿ ಕೊಂಡು ಆಚೆಯ ದಂಡೆಯಿಂದ ಹೋದನು!

ನಾ—ವ್ಯಾಸನಿಗೆ ಬೆಳಗಾವಿಯಲ್ಲಿ ಮಾಸ್ತರಿಕೆಯ ಕೆಲಸ ಹತ್ತಿದೆ. ತಿಂಗಳೆರಡು ತಿಂಗಳೊಳಗೆ ಕಾಯಂ ಆಗತಕ್ಕದ್ದಿದೆ. ವರ ನಿಮ್ಮ ಮನಸ್ಸಿಗೆ ಬರುವನೋ ಇಲ್ಲವೋ ಹೇಳಿರಿ.

ಹೆಂ—ವರ ಮನಸ್ಸಿಗೆ ಬರದೆ ಇರಲಿಕ್ಕೆ ಏನಾಗಿದೆ. ಕಪ್ಪಾ ಗಿದ್ದರೂ ವರ ಚಿಕ್ಕವ. ಒಬ್ಬನೇ ಮಗ. ಮೇಲಾಗಿ ಕೆಲಸವಿದೆ. ಊರಲ್ಲಿ ಮನೆಹೊಲಗಳಿವೆ. ಮನೆಯಲ್ಲಿ ಬೆಳ್ಳಿಬಂಗಾರವಿದೆ. ಜೀವೂಬಾಯಿ ಯವರೂ ಒಳ್ಳೆಯವರು. ನಮ್ಮಂತೆ ಮಾಡಿ ಮುಟ್ಟಿಸಿಕೊಳ್ಳಬೇಕೆಂಬ ಲವಲವಿಕೆಯುಳ್ಳವರು.

ನಾ—ಕೃಷ್ಣಾತೀರದಲ್ಲಿ ವರ್ಣಭೇದಕ್ಕೆ ಪ್ರಾಶಸ್ತ್ಯವಿಲ್ಲ. ನಾರಾಯಣಾ ಕೃಷ್ಣಾಚಾರ್ಯರಿಗೆ ವರದಕ್ಷಿಣೆ ಬೇಕಾಗಿದ್ದರೆ

ನಾವೆಲ್ಲಿಂದ ಕೊಡುವುದು. ವರದಕ್ಷಿಣೆಯ ವಿಷಯವಾಗಿ ಮಾತು ಕತೆಯಾಡಿ ಬಂದಿರುವೆಯಲ್ಲವೆ?

ನಾ— ನೀವು ಬಂಗಾರದ ಮಾತು ತೆಗೆಯದಿದ್ದರೆ ಅವರು ವರ ದಕ್ಷಿಣೆಯ ವಿಷಯವನ್ನು ತೆಗೆಯುವುದಿಲ್ಲವಂತೆ.

ಹೆಂ—ನಾವು ಬಂಗಾರದ ಮಾತು ತೆಗೆಯದಿದ್ದರೂ ಜೀವೂಬಾಯಿ ಯವರು ವಸ್ತ್ರಹಾಕದೆ ಇರುವರೆ?

ನಾ— ಬೀಗರು ವರದಕ್ಷಿಣೆಯ ವಿಷಯವನ್ನೆತ್ತದಿದ್ದರೂ ಆಚಾ ರ್ಯರು ಕೇವಲ ಕಾಯಿ ಕನ್ಯೆ ಕೊಟ್ಟು ಮದುವೆ ಮಾಡುವುದಿಲ್ಲವೆಂದು ಕೃಷ್ಣಾಚಾರ್ಯರಿಗೂ ಗೊತ್ತಿದೆ!

ನಾನು—ನಾರಾಯಣಾ ನಡೆ. ಇಂದು ಮುಹೂರ್ತ ಚೆನ್ನಾಗಿದೆ. ಕೃಷ್ಣಾಚಾರ್ಯರನ್ನು ಕಂಡು ಮಾತುಕತೆಗಳನ್ನಾಡಿ ಬರುವಾ.

ಹೆಂಡತಿಯು ಮಧ್ವಸನ್ನೆತ್ತಿಕೊಂಡು ಹೊರಟಳು. ನಾನೂ ನಾರಾಯಣನೂ ಅವಳೊಡನೆ ನಡೆದೆವು. ಜೀವೂಬಾಯಿ ಕೃಷ್ಣಾ ಚಾರ್ಯರೊಡನೆ ಮಾತುಕತೆಗಳು ಮುಗಿದುವು. ಮರುದಿವಸ ನಿಶ್ಚ ಯವೂ ಸಾಂಗವಾಯಿತು. ಮದುವೆಗೆ ಏಳೆಂಟು ದಿವಸಗಳುಳಿದುವು. ಗಲುಗಲಿ ಕವುಟಕೊಪ್ಪಗಳಿಗೆ ಲಗ್ನಪತ್ರಿಕೆಗಳನ್ನು ಬರೆದು ಕಳುಹಿದೆನು. ಸಾತಪ್ಪನಿಗೆ ಐದುನೂರು ರೂಪಾಯಿಗಳಿಗೆ ಹೊಲ ಒತ್ತೆ ಬರೆದುಕೊಟ್ಟು ಒತ್ತೆಯ ಪತ್ರವನ್ನು ನೋಂದು ಮಾಡಿಸಲು ಅಥಣಿಗೆ ಹೋದವನು ಮದುವೆಗೆ ಬೇಕಾದ ಅರಿವೆಯುಂಚಡಿ ಸಾಮಾನಸಟ್ಟುಗಳನ್ನು ಮನೆ ಯಲ್ಲಿ ತಂದೊಗೆದೆನು.

ಭೀಮನ ಮುಂಜಿವೆ ಸಂಕ್ಷೇಪವಾಗಿ ಮುಗಿಯಿತು. ಮಗಳ ಮದುವೆಯನ್ನೂ ಹಾಗೆಯೆ ತೀರಿಸಬೇಕೆಂದು ನನ್ನ ಸಿಧ್ಧಾಂತ. ದೇವರ ಊಟವು ಎಂಟು ಹತ್ತು ಬ್ರಾಹ್ಮಣ ಮುತ್ತೈದೆಯರಿಂದ ತೀರಿತು. ಮನೆಯ ಮುಂದೆ ದೊಡ್ಡ ಹಂದರ ಹಾಕಬೇಕೆಂದು ಹೆಂಡತಿಯ ಆಗ್ರಹ. ಮನೆಯ ಪಡಿಸಾಲೆ ದೊಡ್ಡದಿದ್ದುದರಿಂದ ಹೆಂಡತಿಯ ಮಾತಿಗೆ ಕಿವಿಗೊಡದೆ, ಅಲ್ಲಿಯೆ ಬೋರಜಗುಲಿ ಹಾಕಿ ಹಣಮನ ಕಡೆಯಿಂದ

ಮಂಗಳಪಟ ಬರೆಯಿಸಿ ಬಾಗಿಲಿಗೆ ತಳಿರುದೋರಣ ಕಟ್ಟಿಸಿದೆನು. ದೀಪದ ವೆಚ್ಚ ಉಳಿಸುವಗೋಸುಗ ಬೆಳಕು ಇರುವಾಗಲೆ ವಾದ್ಯಗಳೊಂದಿಗೆ ಸುಳ್ಳುವುತಣ ಮುಗಿಸಿದೆನು. ನರಸಿಂಹನ ದೇವಾಲಯದಲ್ಲಿ ಎದುರುಗೊಳ್ಳುವುದೂ ನೆರವೇರಿತು.

ಮೂರು ತಾಸು ರಾತ್ರಿಯೊಳಗಾಗಿ ರುಕ್ಕೋತವನ್ನು ತೀರಿಸಬೇಕೆಂದು ನನ್ನ ಆತುರತೆ. ಬೀಗರು ಬಹಳವಾದರೆ ಇಪ್ಪತ್ತು ಜನರು ಬರಬಹುದು; ಮನೆಯೊಳಗೆ ಇಪ್ಪತ್ತು ಜನರು ಇರುವರು; ಆದುದರಿಂದ ಹೆಂಡತಿಗೆ ನಾಲ್ವತ್ತು ಜನರ ಅಡುಗೆ ಮಾಡಿಸಲಿಕ್ಕೆ ಹೇಳಿದೆನು. ಆಕೆಯು ತಾನು ಔತಣ ಕೊಟ್ಟ ಐವತ್ತು ಜನರನ್ನು ಕೂಡಿಸಿ ನೂರು ಜನರ ಅಡುಗೆ ಸಿದ್ಧಪಡಿಸಿದಳು. ಬೀಗರ ಮನೆ ಗುಡಿಸಿ ಎಲೆ ರಂಗವಲ್ಲಿಗಳನ್ನು ಹಾಕಲಿಕ್ಕೆ ಹೋದಾಗ ಜೀವೂಬಾಯಿಯವರು, 'ನಮ್ಮ ಬಳಗ ಬಹಳ. ಮೂರಿಪ್ಪತ್ತು ಎಲೆ ಹಾಕಿರಿ,' ಎಂದು ಹೇಳಿಬಿಟ್ಟರು. ಓಡುತ್ತ ಹೋಗಿ, 'ಬೀಗರಿಗೆ ಅರವತ್ತು ಎಲೆಗಳು ಬೇಕಂತೆ; ಅಡುಗೆ ಮಾಡಿಸು,' ಎಂದು ಸೂಚಿಸಲು ಅವಳು ಮತ್ತೆ ಅಡುಗೆ ಬಳೆಯಿಸತೊಡಗಿದಳು. ಹೀಗಾಗಿ ಭೂಮ ಕೂಡ್ರಲಿಕ್ಕೆ ಒಂಬತ್ತು ತಾಸು ರಾತ್ರಿಯಾಯಿತು. ನೂರ ಐವತ್ತು ಎಲೆಗಳು ಹಾಕಿದುವು. ನಮ್ಮ ಜನರಿಗೆ ಊಟಕ್ಕೆ ಹಿಂದಿನ ಪಂಕ್ತಿಗೆ ಕೂಡ್ರಲಿಕ್ಕೆ ಹೇಳಿದೆನು. ಒಂದೆರಡು ಸಲ ಬಡಿಸುವಾಗಲೆ ಎಲ್ಲ ಅಡುಗೆ ತೀರಿಹೋಯಿತು. ಭೂಮದವರು ಮುಂಡಗೆ ಸಾಲಲಿಲ್ಲವೆಂದೂ, ಉಳಿದವರು ಅನ್ನಸಾರಿಗೆ ಮೇಳ ಕೂಡಲಿಲ್ಲವೆಂದೂ, ಕೆಲವರು ಸಾರಿನಲ್ಲಿ ನೀರು ಬೆರೆತಿದ್ದಿತೆಂದೂ ಕೋಲಾಹಲವನ್ನೆಬ್ಬಿಸಿದರು. ನಾನಂತೂ ಮೋರೆಯನ್ನು ಕೆಳಗೆ ಮಾಡಿಕೊಂಡು 'ತಪ್ಪಾಯಿತು; ಲೆಕ್ಕತಪ್ಪಿತು' ಎಂದು ಕೈ ಜೋಡಿಸಿದೆನು!

ಮುಂಜಾವಿನಲ್ಲಿ ನಾಲ್ಕು ತಾಸಿಗೆ ಮಂತ್ರಾಕ್ಷತೆಯ ಮುಹೂರ್ತ. ಸುರಗೆಯೆರೆದುಕೊಂಡು ಪುಣ್ಯಾಹವಾಚನದೊಂದಿಗೆ ಮಂಟಪದೇವತೆಯ ಸ್ಥಾಪನೆಯಾಯಿತು. ವರನನ್ನು ಕರೆದು ತರುವ ವೇಳೆಯಾಯಿ

ತೆಂದು ಎಲ್ಲರನ್ನು ಎಬ್ಬಿಸತೊಡಗಿದೆನು. ಹೆಂಡತಿಯು ಬಿಸಿಲೂಟಕ್ಕೆ ಬೆಳ್ಳಿಯ ಬಟ್ಟಲ ಬೇಕೆಂದು ನಾರಾಯಣನ ಮನೆಗೆ ಹೋಗಿ ಬಟ್ಟಲ ವನ್ನು ತಂದು ಆಪರಲ್ಲಿ ಶೇವಗೆಯ ಪಾಯಸ ಹಾಕಿ ಹಿಡಿದುಕೊಂಡು ಹೊರಟಳು. ವರನ ಮುಂದಿಟ್ಟ ಆ ಬಟ್ಟಲವೇ ನಮ್ಮ ಕಣ್ಣಿಗೆ ಬೀಳಲಿಲ್ಲ. ಅದನ್ನು ಕಂಡು ನಾನು ಹೆಂಡತಿಗೆ 'ನಾರಾಯಣನ ಬಟ್ಟಲವನ್ನು ಜೀವೂಬಾಯಿಗೆ ಕೇಳಿ ತೆಗೆದುಕೊಂಡು ಬಾ,' ಎನ್ನಲು ಅವಳು ನನ್ನ ಕಿವಿಯಲ್ಲಿ, 'ಬಿಸಿಲೂಟದ ಬಟ್ಟಲ 'ಬೀಗರಿಗೆ ಕೊಡುವುದು ಪದ್ಧತಿ; ಚೆಂದದ ಕೆಲಸ,' ಎಂದಳು. ಸುಮುಹೂರ್ತದಲ್ಲಿ ಮಂತ್ರಾಕ್ಷತೆ ಬಿದ್ದುವು. ನಾನು ನೂರು ರೂಪಾಯಿ ನಗದು ಅಳಿಯನ ಕೈಯಲ್ಲಿ ವರದಕ್ಷಿಣೆಯಿಟ್ಟೆನು. ಅಂದೇ ಮನೆದುಂಬಿಸಿಕೊಳ್ಳುವುದು ಗೊತ್ತಾ ದುದರಿಂದ ಜೀವೂಬಾಯಿಯವರು 'ಒಂದೇ ಭೂಮ ಚೆಂದ ಕಾಣು ವುದಿಲ್ಲ. ಮಧ್ಯಾಹ್ನ ಫಲಾಹಾರದ ಭೂಮವಾಗಲೇಬೇಕು' ಎಂದು ಹಟ ಹಿಡಿದರು. ಹೆಂಡತಿಯು ಕುಣಿಕುಣಿದಾಡಿ ಮಧ್ಯಾಹ್ನ ಫಲಾ ಹಾರದ ಭೂಮವನ್ನೂ ಬಡಿಸಿದಳು.

ಸಂಜೆಗೆ ಊಟದ ಭೂಮ ಪ್ರಾರಂಭವಾಯಿತು. ಗ್ಯಾಸಿನ ದೀಪ ಗಳಿದ್ದರೂ ಹತ್ತು ಸಮೆಗಳನ್ನು ಹಚ್ಚಿ ಇಟ್ಟೆವು. ಎರಡು ಮೊಳ ಅಗಲ ಹನ್ನೆರಡು ಮೊಳ ಉದ್ದ ಕುಡಿಬಾಳೆಯ ಎಲೆಗಳನ್ನು ಒಂದ ಕ್ಕೊಂದು ಹಚ್ಚಿ ಹಾಕಿದೆವು. ಮಣೆಯ ಮೇಲೆ ಊಟಕ್ಕೆ ಕುಳಿತವರಿಗೆ ಬೊಗ್ಗಿ ಕೈಚಾಚಿದರೂ ನಿಲುಕದಂತೆ ಎಲೆಯ ತುದಿ ದೂರದಲ್ಲಿದ್ದರೂ ಎಲೆಗಳನ್ನು ತುಂಬಿ ಬಡಿಸಿದೆವು. ದೊನ್ನೆಗಳನ್ನೆಷ್ಟಿಟ್ಟೆವೆಂಬುದರ ಲೆಕ್ಕ ವನ್ನೇ ಹಾಕಲಿಲ್ಲ. ಮದುಮಕ್ಕಳು ಬೀಗರು ಪೀತಾಂಬರಗಳನ್ನುಟ್ಟು ಕುಳಿತರು. ಊಟ ಪ್ರಾರಂಭವಾಯಿತು. ಕೆಲವರು, ಸಮೆಗಳಿಗೆ ಇಳಿಬಿಡಲಿಕ್ಕೆ ಹೋಳಿಗೆ ಕಡಿಮೆಯಾಗಿವೆಯೆಂದು, ಕೆಲವರು ಗೋಡೆಗೆ ಚೆಟ್ಟು ಬಡೆಯಲಿಕ್ಕೆ ತುಪ್ಪ ಹೆಚ್ಚಾಗಿಲ್ಲವೆಂದು, ಭೂಮದ ಮುಂದೆ ಬಡಿಸಿಟ್ಟ ಪಾತ್ರೆಗಳು ಸಣ್ಣವಿರುವುವೆಂದು ಕೆಲವರು, ಭೂಮದಲ್ಲಿ ಬಡಿ ಸಲಿಕ್ಕೆ ಗಂಡಸರೇ ಬರುವುದರಿಂದ ಅವರ ಕೈಯೊಳಗಿನ ಪಾತ್ರೆಗಳನ್ನು

ಎಂಜಲಗೈಯಿಂದ ಮುಟ್ಟಲಿಕ್ಕೆ ಸಂಕೋಚವಾಗುವುದೆಂದು ಕೆಲವರು, ಸಾರೆಂದು ತಂದ ಕಾಗೆಯ ಮೂತಿಯಲ್ಲಿ ಬಿಸಿನೀರಿರುವುದೆಂದು ಕೆಲವರು, ಹೀಗೆ ಭೂಮದಲ್ಲಿ ಕುಳಿತವರು ಅವರ ಸುತ್ತುಮುತ್ತಲು ಕಲೆತವರು ಎಲ್ಲರೂ ಕೆಲೆಯಲಾರಂಭಿಸಿದರು. ಹೆಂಡತಿಯು ಭವನಾಶಿನಿಯನ್ನು ಕಾಸಿಕೊಂಡು ಬಾಳೆಯೆಲೆ ಹಿಡಿದು ಬಡಿಸಲು ಬಂದ ಕೂಡಲೆ ಒಬ್ಬಳು ಅದನ್ನು ಮುಟ್ಟಿ ಕೈಸುಟ್ಟುಕೊಂಡು ಅದರಲ್ಲಿ ತುಪ್ಪವೆ ಇರಲಿಲ್ಲವೆಂದು ಗೊಂದಲವನ್ನೆಬ್ಬಿಸಿದಳು. ಅಷ್ಟರಲ್ಲಿ ಮುಂದಿಬ್ಬರು ಹಿಂದಿಬ್ಬರು, 'ಸರಿಯಿರಿ ಸರಿಯಿರಿ' ಎಂದು ಆರ್ಭಟೆ ಮಾಡುತ್ತ ದೊಡ್ಡ ಅನ್ನದ ತಪ್ಪೇಲಿಯನ್ನು ದಣಿ ಹೊತ್ತುಕೊಂಡು ಭೂಮದ ಮುಂದಿರಿಸಿದರು. ಮೊಗದಲ್ಲಿ ಮೊರ ಇರಿಸಿ ಅದರಲ್ಲಿ ಅನ್ನ ಉದುರಿಸಿ ತಪ್ಪೇಲಿ ತುಂಬಿದೆಯೆಂದು ತೋರಿಸಿ ಬೀಗರು ಮೋಸ ಮಾಡಿದರೆಂದು ಜೀವೂಬಾಯಿಯವರು ವೋರೆ ಡೊಗರಿಸಿದರು! ಇತ್ತ ಹಾಡಿನ ಲಗ್ಗೆ ನಡದೇ ಇದ್ದಿತು.

ಗಂಡಿನವರು

ಅಡುಗೆ ಮಾಡಿದ ಸಡಗರವ ನೋಡಿದೆಯಾ ।
ಬಡವಾರದೆ ಬೆಳಕಿಲಿ ನಡೆಯುತಲಿಹಳು ॥ ಪಲ್ಲ ॥
ಶೀವಗೆ ಮಿಣಿಯೆಂದು ಮೋಹಪ್ರ ಬರುವುದು ।
ಬಟ್ಟವೆ ಬೆನಕನ ನಾಚಿಸುತಿಹುದು ॥
ಸಪ್ಪಳವಾಗುವ ಹಪ್ಪಳ ನೋಡಿದೆಯಾ ।
ಕೊಪ್ಪರಿಗೆಯ ತಳಕೊಪ್ಪುತಲಿಹುದು ॥

ಹೆಣ್ಣಿನವರು

ಸಿಂದೆ ಮಾಡುವರೇನೆ । ಮಾನುನಿ ।
ಸಿಂದೆ ಮಾಡುವರೇನೆ ॥ ಪ ॥
ರಂಭೆ ನಿನ್ನ ಪೊಡೆಯೊಳು ಪಕ್ವಾನ್ನಗಳು ತುಂಬಿಹೆ ।
ಕುಂಭಕರ್ಣನ ತಂಗಿ ಅಹುದಹುದೆ ॥

ಗಂಡಿನವರು

ಏನು ಮಾತಾಡಿದಿ ಮಾನುಸ ಮಣಿಯೆ ।
ಭಾನು ಪ್ರಕಾಶವಂತೆ ಹೊಳೆವ ಸುಂದರಗೆ ॥ ಪ ॥
ವಿದ್ಯೆಯೊಳತಿ ಸಂಪೂರ್ಣನಾದವಗೆ ।
ಮುದ್ದು ಸರಸತಿಯನೊಲಿಸಿಕೊಂಡವಗೆ ॥

ಹೆಣ್ಣಿನವರು

ಅಳಿಯ ಬಂದಾನೆ ನೋಡೆ ।
ಮಳಿಯ ಮೋಡದ ಬಣ್ಣ ॥ ಪಲ್ಲ ॥
ಹಲಗೆ ಬಳಪವಾ ತರಿಸೆ ।
ಸಲೆ ಓನಾಮಾ ಬರಿಸೆ ॥

ಅಳಿಯನು ಕಿಡಿಕಿಡಿಯಾಗಿ ಘಟ್ಟನೆ ಎದ್ದು ಹೋದನು! ಹೆಣ್ಣು ಮಕ್ಕಳಲ್ಲಿ ತಾರತಮ್ಯಜ್ಞಾನ ಕಡಿಮೆ! ಮುಲ್ಕಿಯಂತಹ ಪರೀಕ್ಷೆ ಕೊಟ್ಟು ಮಾಸ್ತರನಾದ ಮದುಮಗನಿಗೆ ಹಲಗೆ ಬಳಪ ಹಿಡಿಯಲಿಕ್ಕೆ ಹೇಳುವುದು ಎಂತಹ ಮಾತು! 'ಯಾವ ರೋಗ ಬಂದರೂ ದೀವಟಿಗನ ಸುತ್ತ,' ಎಂಬುವಂತೆ ಅದಕ್ಕಾಗಿ ನನಗೆಯೇ ಪ್ರಾಯಶ್ಚಿತ್ತ ತೆಗೆದುಕೊಳ್ಳಬೇಕಾಗುವುದೆಂದು ಭಯಭರಿತನಾದೆನು!

ಸಾಡೆಯ ಸಮಾರಂಭ ನಡೆಯಿತು. ಕೂಸೊಪ್ಪಿಸುವ ಮುಂಚೆ ಹೆಂಡತಿಯು ತನ್ನ ತಂದೆ ತಾಯಿಗಳು ಲಗ್ನ ನೋಡಲಿಕ್ಕೆ ಇರಲಿಲ್ಲವೆಂದು ಬಿಕ್ಕಿ ಬಿಕ್ಕಿ ಮುಳು ಮುಳು ಅಳತೊಡಗಿದಳು. ನನ್ನ ಕಣ್ಣಿನಿಂದಲೂ ಹನಿಗಳು ಉದುರಿದುವು. ನನ್ನ ತಾಯಿತಂದೆಗಳು ತೀರಿಕೊಂಡರೆಂದಲ್ಲ. ಹಡೆದ ಮಗಳನ್ನು ಹೆರವರಿಗೆ ಒಪ್ಪಿಸುವುದರಲ್ಲಿ ಎಂತಹ ಕಲ್ಲೆದೆಯವನಿಗೂ ಕಣ್ಣೀರು ಸುರಿಯುವುದುಂಟು. ಮನೆದುಂಬಿಸಿಕೊಳ್ಳುವುದೂ ಮುಗಿಯಿತು. ಮರುದಿನ ಬೀಗರ ಮಾಮನೆಯ ಊರ ಊಟವೂ ಆಯಿತು.

ಕಳಹುವೂಟಕ್ಕೆ ಬೀಗರನ್ನಷ್ಟೇ ಕರೆಯಬೇಕೆಂದು ನನ್ನ ಹಟ. ಊರವರು, 'ನರಸಿಂಹಾಚಾರ್ಯರ ಮಗಳ ಲಗ್ನವೆಂದರೆ ಗೊಂಬೆಯ ಮದುವೆ. ಊರವರು ಉಂಡು ಕೈದೊಳೆಯಲಿಲ್ಲ,' ಎಂದು ಅಂದು

ದನ್ನು ಹೆಂಡತಿಯು ಕೇಳಿ ನನ್ನ ಮುಂದೆ ಅವರ ದೂರು ಹೇಳಿದಳು. ಊರಿಗೆ ಔತಣವಾಯಿತು. ಜನರು ಊಟಕ್ಕೆ ಬಂದರು; ಎಲೆಗಳೂ ಹಾಕಿದುವು. ಬೀಗರನ್ನು ಕರೆದು ತರಲಿಕ್ಕೆ ಊದಿಸುತ್ತ ಬಾರಿಸುತ್ತ ಹೋದೆವು. ಅಳಿಯನಿಗೆ ಸಿಟ್ಟು ಬಂದಿದೆಯೆಂದು ಜೀವೂಬಾಯಿಯ ವರೇ ಹೇಳಿಬಿಟ್ಟರು. ನಾನು ಕೃಷ್ಣಾಚಾರ್ಯರ ಕಡೆಗೆ ಹೋಗಿ, ಅವರ ಕಾಲು ಹಿಡಿದು ಕ್ಷಮೆ ಬೇಡಿದೆನು. ಅವರು, 'ಆಚಾರ್ಯರೆ, ನೋಡಿರಿ, ಮದುವೆಯಲ್ಲಿ ಹೆಣ್ಣುಮಕ್ಕಳೇ ಹಿರಿಯರು. ಏನಾದರು ಕೊಟ್ಟು ಬಗೆ ಹರಿಸಿರಿ,' ಎಂದರು. ಹೆಂಡತಿಯು ಜೀವೂಬಾಯಿಯವರಿಗೆ ಏನೋ ಕಿವಿ ಮಾತು ಹೇಳಿ ಬೀಗರನ್ನೆಬ್ಬಿಸಿದಳು. ಪ್ರಸ್ತವೂ ಸುಸೂತ್ರವಾಗಿ ಮುಗಿ ಯಿತು. ಉರುಟಣಿಯಾದೊಡನೆ ಅಳಿಯನಿಗೆ ಶಲ್ಲೆಯನ್ನು ಕೊಡಲಿಕ್ಕೆ ಹೋಗುವಷ್ಟರಲ್ಲಿ ಹೆಂಡತಿಯು ನನ್ನನ್ನು ಕರೆದು, 'ಈ ಥಾಲಿಯನ್ನೂ ಅದರ ಜೊತೆಗೆ ಕೊಟ್ಟು ಬಿಡಿ; ಅಮ್ಮನು ನನಗೆ ಕೊಟ್ಟುದನ್ನು ಬಚ್ಚಿ ಟ್ಟಿದ್ದೆನು,' ಎಂದು ವಾಟಗವೊಂದನ್ನು ನನ್ನ ಕೈಯಲ್ಲಿರಿಸಿದಳು. ನನಗೆ ಹೆಚ್ಚಿಗೆ ಮಾತಾಡಲು ವೇಳೆಯಿರಲಿಲ್ಲ. ಉಡುಗೊರೆ ಬಳಿವಳಿಗಳಾದ ಮೇಲೆ ಆರುತಿ ಮಾಡಿ ಬೀಗರಿಗೆ ಬೀಳ್ಕೊಟ್ಟೆವು.

ಹಂದರದ ಜಡ್ಡು ಬರದಿದ್ದರೆ ಮದುವೆ ಚೆಂದವಲ್ಲ. ನನಗೆ ಹುಗುಳು ನೆಗಡಿಗಳಾಗಿ ಮೈ ಕೊಂಚ ಕಾಯಿತು. ಹೆಂಡತಿಗೆ ನೆಗಡಿ ಕೆಮ್ಮುಗಳು ಬಂದು ದನಿ ಕೂತು ಹೋಯಿತು. ಮೂರು ದಿವಸದ ಆಯಾಸದಿಂದ ಅಡ್ಡಾದ ಕೂಡಲೆ ನಿದ್ರೆ ಹತ್ತಿತು. ಆರು ತಾಸು ರಾತ್ರಿಗೆ ಬೀದಿಯಲ್ಲಿ ಹಾಡಿನಸಪ್ಪಳ ಕೇಳ ಬಂದಿತು. ನಾನು ಮಲಗಿದಲ್ಲಿಯೆ ಅದನ್ನು ಕೇಳು ತ್ತಲೆ ಇದ್ದೆನು. ದನಿಯು ಬಾಗಿಲವನ್ನೇ ತಲಪಿತು. ಹೆಂಡತಿಯು ಎದ್ದು, 'ಮುಯ್ಯ ಬಂದಿದೆ, ಕಡ್ಡಿಯ ಪಟ್ಟಣವೆಲ್ಲಿ?,' ಎಂದು ನನ್ನ ಕಿವಿ ಯಲ್ಲಿ ಕೇಳಿದಳು. ನನಗೆ ಗೊತ್ತಿಲ್ಲವೆಂದು ಹೇಳಿ, ಇಬ್ಬರೂ ಕಡ್ಡಿಯ ಪಟ್ಟಣವನ್ನು ಕತ್ತಲೆಯಲ್ಲಿಯೆ ಕಡಬಡ ಹುಡುಕಲಾರಂಭಿಸಿದೆವು. ಹಣಮ ಭೀಮರ ಕಾಲು ತುಳಿದುದರಿಂದ, ಅವರು, 'ಅಪ್ಪಾ, ಅವ್ವಾ,' ಎಂದು ಒದರಲು, 'ನಾವೇ ಇದ್ದೇವೆ; ಒದರ ಬೇಡಿರಿ; ಕಡ್ಡಿಯ

ಪಟ್ಟಣವೆಲ್ಲಿ?' ಎಂದು ಕೇಳಿದೆವು. ಪಮ್ಮಮಧ್ವರು ಎಚ್ಚತ್ತು ಗಾಬರಿ ಯಾಗಿ ಚೀರ ತೊಡಗಲು ನಾನು ಅವರ ಬಾಯಿ ಹಿಡಿದು ಚೀರ ಕೂಡದೆಂದು ಬೆದರಿಕೆ ಹಾಕಿದೆನು. ಬಾಗಿಲ ಮುಂದೆ ಹುಡುಗಳು ಹುರುಪಿನಿಂದ ನಡೆದೇ ಇದ್ದುವು. ನಾನು ಹೆಂಡತಿಯನ್ನು ಕರೆದು ಕೊಂಡು ಹೋಗಿ ಹಿತ್ತಲ ಕುಂಬಿಯ ಹತ್ತರ ಕುಳ್ಳಿರಿಸಿ, ಹೆಗಲ ಮೇಲೇರಿ ಕುಂಬಿಯನ್ನು ಹತ್ತಿ ಆಚೆಗೆ ಜಿಗಿದೆನು. ಹಿಂದಿನ ಮನೆಯ ವರನ್ನೆಬ್ಬಿಸಿ ಕಡ್ಡಿಯ ಪಟ್ಟಣ ತೆಗೆದುಕೊಂಡು ಅದೇ ಮಾರ್ಗವಾಗಿ ಗೋಡೆಯನ್ನೇರಿ ಕೆಳಗೆ ಹಾರಿದೆನು. ಕಾಲುದಪ್ಪಿ ಕುಕ್ಕರ ಬಿದ್ದುದ ರಿಂದ ನನ್ನ ಕಾಲೊಳೆದು, 'ಅಯ್ಯೋ' ಎಂದು ಒದರಲು, ಹೆಂಡತಿಯು, 'ಒದರ ಬೇಡಿರಿ; ಹೊರಗಿನವರಿಗೆ ಎಚ್ಚತ್ತುದು ತಿಳಿಯಬಹುದು; ಕಡ್ಡಿಯನ್ನು ಕೊಡಿರಿ,' ಎಂದು ಸಾವಕಾಶವಾಗಿ ನುಡಿದು ಕಡ್ಡಿಯ ಪೆಟ್ಟಿಗೆಯನ್ನು ಒಯ್ದಳು. ನಾನು ಕುಂಟುತ್ತ ಹಾಸಿಗೆಯ ಮೇಲೆ ಹೋಗಿ ಕಾಲು ತಿಕ್ಕಿಕೊಳ್ಳುತ್ತ ಕುಳಿತೆನು. ದೀವಿಗೆಯ ಬೆಳಕಾಯಿತು. ಮಕ್ಕಳೆಲ್ಲರು ಗಾಬರಿಯಾಗಿ ನನ್ನನ್ನವಚಿಕೊಂಡು ಕುಳಿತರು. ಹೆಂಡ ತಿಯು ಪಮ್ಮಿಯ ಗೊಂಬೆಗೆ ಸೀರೆ ಉಡಿಸಿ ಅದನ್ನು ಒಂದು ಪೆಟ್ಟಿಗೆಯ ಮೇಲಿರಿಸಿ ಮುಂದೆ ಸಮೆ ಹಚ್ಚಿ ಬಾಗಿಲ ತೆರೆದಳು. ಬಂದವರಲ್ಲಿ ಕೆಲವರು ನಮ್ಮ ಪಕ್ಷ ವಹಿಸಿದರು, ಕೆಲವರು ಬೀಗರ ಪಕ್ಷ ವಹಿಸಿದರು. ಹಾಡಿನ ಲಗ್ಗೆಗೆ ಲಗ್ಗೆ ಹತ್ತಿತು. ನಡುನಡುವೆ ಹೆಂಡತಿಯೂ ಗೊಗ್ಗರ ದನಿಯಿಂದ ಹಾಡುತ್ತಲಿದ್ದಳು. ವೆಂಕಟೇಶಪಾರಿಜಾತವು ಮುಗಿಯ ಲಿಕ್ಕೆ ಬೆಳಗಾಯಿತು!

ಬೀಗರನ್ನು ಕಳುಹಿ ಬಚ್ಚಲಕ್ಕೆ ಹೋಗುವಷ್ಟರಲ್ಲಿ ಎರಡೂ ಬಳ ಕೆಯ ತಂಬಿಗೆಗಳಿರಲಿಲ್ಲ; ಬಿಂದಿಗೆ ಕಣ್ಣಿಗೆ ಬೀಳಲಿಲ್ಲ. ಹೆಂಡತಿಯನ್ನು ಕರೆದು 'ಏನೇ, ಬೀಗರು ಭಾಂಡಿಗಳನ್ನು ಕಳವು ಮಾಡಿದ ಹಾಗೆ ತೋರುತ್ತದೆ. ಎಷ್ಟೆಷ್ಟು ಪಾತ್ರೆಗಳು ಹೋಗಿರುವುವೆಂಬುದನ್ನು ನೋಡು,' ಎಂದು ಹೇಳಿ ಕಳೆದ ಪಾತ್ರೆಗಳ ಲೆಕ್ಕ ಹಾಕಲಾಗಿ, ಎರಡು ಬಳಕೆಯ ತಂಬಿಗೆಗಳು, ಒಂದು ಬಿಂದಿಗೆ, ಒಂದೊಂದು

ಪರಾತ ತಪ್ಪೇಲಿ ಕಬ್ಬಿಣ ಹಂಚು, ಎರಡು ಸಟ್ಟುಗಗಳು, ಕಣ್ಮರೆಯಾದುದು ಕಂಡುಬಂದಿತು. ನಾನು ಹೆಂಡತಿಗೆ, 'ಜೀವೂಬಾಯಿಯವರ ಕಡೆಗೆ ಹೋಗಿ ಅವುಗಳನ್ನು ತೆಗೆದುಕೊಂಡು, ಬಾ' ಎನ್ನಲಾಗಿ ಅವಳು, 'ಮದುವೆಯಲ್ಲಿ ಬೀಗರಿಗೆ ಕಳವು ಮಾಡುವ ಅಧಿಕಾರವಿದೆ. ಜೀವೂಬಾಯಿಯವರು ಮೊದಲೇ ಸಿಟ್ಟಾಗಿದ್ದಾರೆ. ಚೆಂದದ ಕೆಲಸ,' ಎಂದು ಬಿಟ್ಟಳು. ಮನೆಯಲ್ಲಿ ಮುಯ್ಯದ ಊಟವಾಯಿತು. ನೆರೆಹೊರೆಯವರನ್ನು ಕಳೆಹಾಕಿ ಆ ದಿನ ರಾತ್ರಿ ಹೆಂಡತಿಯು ಮುಯ್ಯಕ್ಕೆ ಮುಯ್ಯ ತೀರಿಸಿದಳು. ಅವಳು ಬಂದ ಕೂಡಲೆ ನಾನು, 'ಎಲೆಗೆ, ನೀನು ಎಷ್ಟೆಷ್ಟು ಪಾತ್ರೆಗಳನ್ನು ಕದ್ದುಕೊಂಡು ಬಂದಿರುವೆ?' ಎಂದು ಕೇಳಲು ಅವಳು, 'ಗಂಡಿನವರಿಗಷ್ಟೇ ಕಳವಿನ ಅಧಿಕಾರ,' ಎಂದು ಹೇಳಿ ನನ್ನ ಬಾಯಿ ಮುಚ್ಚಿದಳು!

# ಪ್ರಯಾಣ

'ಮದುವೆ ಮಾಡಿನೋಡಬೇಕು, ಮನೆ ಕಟ್ಟಿನೋಡಬೇಕು,' ಎಂಬುವ ಮಾತು ಅನುಭವಸಿದ್ಧವಾಗಿದೆ. ನೂರಿನ್ನೂರು ರೂಪಾಯಿಗಳಲ್ಲಿ ಮುಗಿಸಬೇಕೆಂದ ಮದುವೆಗೆ ಮೂರುವರೆನೂರು ರೂಪಾಯಿ ಸಾಲದಾದುವು. ನನ್ನ ತೇರು ಎಳೆದುಹೋಯಿತು! ಮಕ್ಕಳ ಶಿಕ್ಷಣದ ನೆವ ಮಾಡಿ ಉಳಿದ ರೂಪಾಯಿಗಳ ಗಂಟು ಕಟ್ಟಿಕೊಂಡು ಮನೆಬಿಟ್ಟು ಹೋಗುವುದನ್ನು ಮನದಲ್ಲಿ ಗೊತ್ತುಪಡಿಸಿದೆನು.

ಗ್ರಾಮತ್ಯಾಗವು ಎಂತಹರಿಗೂ ಕಷ್ಟಕರ. ದಾರಿದ್ರ್ಯದ ದಾರುಣ ದೆಗೆಳಿಳಿದು ಮುಂದಿನ ಹೊಲಬನ್ನರಿಯದೆ ಹೊಟ್ಟೆಯ ಪಾಡಿಗಾಗಿ ಮನೆ ಬಿಟ್ಟು ಗುಳೆಗಟ್ಟಿಕೊಂಡು ಹೊರಡುವ ಬಾರಿಯು ಯಾರ ವೈರಿಗೂ ಬರಬಾರದು! ಈ ವಿಚಾರದಿಂದ ನನ್ನ ಮೈ ಕಂಪಿಸತೊಡಗಿತು.

ಇದ್ದ ಊರಲ್ಲಿಯೆ ಇಂತಹ ಪರಿಸ್ಥಿತಿಗೀಡಾದವನು ಪರಸ್ಥಳದಲ್ಲಿ ಸಂಸಾರ ಸಾಗಿಸುವುದು ಹೇಗೆಂದು ಭಯದಿಂದ ಬೆಂಡಾದೆನು. ಶೂರ್ಪಾಲಿಯಲ್ಲಿ ನನ್ನ ಮಕ್ಕಳು ಮರಿಗಳ ಹೊಟ್ಟೆಗೆ ಅನ್ನವಿಲ್ಲವೆಂದು ನೆರೆಹೊರೆಯವರಿಗೆ ತಿಳಿದರೆ ಯಾರಾದರು ಕರೆದು ಅವರಿಗೆ ತುತ್ತು ಅನ್ನ ಹಾಕಬಹುದು. ಮೈಮೇಲಿನ ಅರಿವೆಯುಂಚಡಿಗಳು ಹರಿದು ಚಿಂದೆಯಾದರೆ ಕನಿಕರ ಬಟ್ಟು ಯಾರಾದರು ವಸ್ತ್ರದಾನ ಮಾಡಬಹುದು. ನಮ್ಮಿಬ್ಬರಿಗೆ ಬೇನೆ ಬೇಸರಿಕೆ ಮೊದಲಾದ ಅನುವು ಆಪತ್ತುಗಳೊದಗಿದರೆ ಊರವರು ನಮ್ಮ ಆರೈಕೆ ಮಾಡಿ ನಮ್ಮ ಮಕ್ಕಳಿಗೆ ಧೈರ್ಯ ಕೊಡಬಹುದು. ಅಪರಿಚಿತ ಊರೊಳಗೆ ನಮ್ಮೆಡೆಗೆ ಬರುವವರಾರು, ನಮ್ಮನ್ನು ಕೇಳುವವರಾರು ಎಂದು ಚಿಂತಿಸಿ ನನ್ನ ಚಿತ್ತ ಕಾತರಗೊಳ್ಳಹತ್ತಿತು. ಹೀಗಾಗಿ ನಿಂತಲ್ಲಿ ಕುಳಿತಲ್ಲಿ ಮಲಗಿದಲ್ಲಿ ಹೋದಲ್ಲಿ ಬಂದಲ್ಲಿ ಎಲ್ಲೆಡೆಯಲ್ಲಿ ತುಂಬ ಅಂಜಿಕೆ ಬರತೊಡಗಿತು. ಊರಲ್ಲಿರಬೇಕೋ, ಊರು ಬಿಟ್ಟು ಹೋಗಬೇಕೋ ಎಂಬ ವಿಚಾರದ್ವಂದ್ವದಲ್ಲಿ ಗ್ರಾಮತ್ಯಾಗವೇ ಬಲಪಡೆಯಹತ್ತಿತು. ಏಕೆಂದರೆ, ನನ್ನಲ್ಲಿದ್ದ ಹಣ ಒಂದು ವರ್ಷ ಅನ್ನವಾಗಬಹುದು. ಆದರ ಮುಂದಿನ ವರ್ಷ ಅದೇ ಪ್ರಶ್ನೆಯನ್ನು ಬಿಡಿಸಬೇಕಾಗುವುದು. ಊರಲ್ಲಿ ಒಂದು ವರ್ಷ ಉಳಿದರೆ ಹಣಮನ ಶಿಕ್ಷಣ ಒಂದು ವರ್ಷ ಮುಂದೆ ಬಿದ್ದಿತು. ಆದುದರಿಂದ ಆದಷ್ಟು ಬೇಗನೆ ಕೈಯಲ್ಲಿ ಗಂಟಿರುವಾಗಲೆ ಊರು ಬಿಡುವುದು ಉಚಿತವೆಂದು ಗೊತ್ತುಪಡಿಸಿದೆನು.

ನಾರಾಯಣನು ಬಂದೊಡನೆ ಅವನಿಗೆ—

ನಾನು—ಹಣಮನ ಇಂಗ್ರೇಜಿ ಶಿಕ್ಷಣಕ್ಕಾಗಿ ಊರು ಬಿಡಬೇಕೆಂದು ಗೊತ್ತಾಗಿದೆ. ಮಗನ ಶಿಕ್ಷಣ ನನ್ನ ವೃತ್ತಿ ಇವುಗಳಿಗೆ ಅನುಕೂಲವಾದ ಊರಾವುದು ?

ನಾರಾ—ಆಚಾರ್ಯರೇ, ಊರನ್ನೇಕೆ ಬಿಡುವಿರಿ. ನೀವಿಲ್ಲಿದ್ದು ಮಗನನ್ನು ಜಂಬುಕಂಡಿಯಲ್ಲಿಟ್ಟು ಅವನ ಶಿಕ್ಷಣವನ್ನು ಪೂರ್ತಿಗೊಳಿಸಬಹುದು.

ನಾಸು—ನಾವಿಲ್ಲಿದ್ದು, ಮಗನನ್ನು ಅಲ್ಲಿಟ್ಟು, ಎರಡೂ ಖರ್ಚು ನಡೆಯಿಸುವುದು ಹೇಗೆ? ನಾವೆಲ್ಲರು ಜಂಬುಕಂಡಿಗೆ ಹೋದರೆ ನನ್ನ ಚರಿತಾರ್ಥ ಸಾಗುವುದಿಲ್ಲ. ಅಲ್ಲಿರುವ ವೈದಿಕರೇ ಒದರುತ್ತಿರುವರು. ಈ ಊರವರು ಆಗಾಗ್ಗೆ ಅಲ್ಲಿ ಬರುವುದುಂಟು. ಮನೆಮಾಡಿತೆಂದರೆ ಅವರನ್ನು ಕರೆದರೆ ಸಂಕಟ, ಕರೆಯದಿದ್ದರೆ ಧರ್ಮಸಂಕಟ!

ನಾರಾ—ಹಾಗಾದರೆ ಬೆಳಗಾವಿ ನೆಟ್ಟಗೆ, ನೀರುನಿಡಿಗೆ ಅನುಕೂಲ; ನಿಮ್ಮ ವೃತ್ತಿಯೂ ಸಾಗುವಂತಿದೆ; ಹಣಮನ ಶಿಕ್ಷಣವೂ ಆಗುವುದು.

ನಾ—ನನ್ನ ದೈನ್ಯಾವಸ್ಥೆಯನ್ನು ನಮ್ಮೂರ ಜನರು ನೋಡುವುದು ಬೇಡ. ಬೆಳಗಾವಿಯಲ್ಲಿ ಅಳಿಯನಿರುವನು. ಶೂರ್ಪಾಲಿಯವರು ಬೆಳಗಾವಿಗೆ ಆಗಾಗ್ಗೆ ಹೋಗಿ ಬರುವುದುಂಟು. ನಾರಾಯಣಾ, ನನಗೆ ಅಜ್ಞಾತವಾಸ ಬೇಕಾಗಿದೆ!

ನಾರಾ—ಹಾಗಾದರೆ ಧಾರವಾಡವೇ ಯೋಗ್ಯ ಸ್ಥಳ. ಅಲ್ಲಿ ಅನೇಕ ಧನಿಕರಾದ ಭಾವಿಕ ಗೃಹಸ್ಥರಿರುವರು. ವೈಷ್ಣವ ಸಮಾಜ ದೊಡ್ಡದಿದೆ. ಜಾಗರೂಕತೆಯಿಂದಿದ್ದರೆ ಊರು ಬಡ ವೈದಿಕರಿಗೂ ಅನುಕೂಲವಾಗಿದೆ. ಅಲ್ಲಿ ನಮ್ಮೂರ ಜನರು ತೀರ ಕಡಿಮೆ.

ನಾ—ಧಾರವಾಡದಲ್ಲಿ ನೀರಿನ ಆರವಿರುವುದೆಂದು ಕೇಳಿದ್ದೆನಲ್ಲ?

ನಾರಾ—ಆ ಮಾತು ಮೊದಲಿನದು. ಈಗ ತೋಟಗಳಾಗಿವೆ. ವರ್ಷದಲ್ಲಿ ಹತ್ತು ತಿಂಗಳು ತೋಟಯಲ್ಲಿ ನೀರಿಲ್ಲದಿದ್ದರೂ ನಡೆಯಬಹುದೆಂದು ಮುಂಜಾಗ್ರತೆಯಿಂದ ಧಾರವಾಡದ ಹಿರಿಯರು ಭಾವಿಗಳನ್ನು ಕಾಯ್ದಿಟ್ಟಿರುವರು.

ನಾ—ಅಲ್ಲಿ ನಿನಗೆ ಪರಿಚಿತರಾದ ಯಜಮಾನರಿದ್ದರೆ ಅವರಿಗೆ ಪತ್ರ ಹಾಕುವೆಯಾ? ನಾವು ಹೋದ ಬಳಿಕ ಅಲ್ಲಿಳಿದು ಮನೆ ನೋಡಿಕೊಂಡು ಹೋಗಲಿಕ್ಕೆ ಅನುಕೂಲವಾಗುವುದು.

ನಾರಾ—ಕೋಣನತಂಬಿಗೆಯ ಕೇಶವಾಚಾರ್ಯರ ಮಕ್ಕಳಾದ ವೆಂಕಟರಾಯರು ನನ್ನ ತೀರ ಪರಿಚಯದವರು. ಒಳ್ಳೆ ಭಾವಿಕ

ಗೃಹಸ್ಥರು. ಕಚೇರಿಯಲ್ಲಿ ಶಿರಸ್ತೆದಾರರಾಗಿದ್ದಾರೆ. ಕೇಶವಾಚಾರ್ಯರ ಪರಿಚಯ ನಿಮಗಿರಲಿಕ್ಕೆ ಸಾಕು. ಅವರು ಅಥಣಿಯಲ್ಲಿ ಮಾಮಲೇದಾರರಿರುವಾಗ ಆಗಾಗ್ಗೆ ಶೂರ್ಪಾಲಿಗೆ ಮುಕ್ಕಾಮು ಹಾಕಿ ಅಶ್ವತ್ಥಾಚಾರ್ಯರಿಂದ ಭಗವದ್ಗೀತೆಯ ಒಂದಾದರು ಅಧ್ಯಾಯವನ್ನು ಕೇಳದೆ ಹೋಗುತ್ತಿರಲಿಲ್ಲ. ವೆಂಕಟರಾಯರು ನಾನು ಹೋದಾಗೊಮ್ಮೆ ಅಶ್ವತ್ಥಾಚಾರ್ಯರ ನೆನೆಪು ತೆಗೆದು ನಿಮ್ಮ ವಿಷಯಕ್ಕೂ ವಿಚಾರಿಸುತ್ತಾರೆ. ಅವರಿಗೆ ಪತ್ರ ಬರೆದರೆ ಎಲ್ಲವೂ ಅನುಕೂಲವಾಗುವುದು.

ನಾರಾಯಣನ ಕಡೆಯಿಂದ ಓಲೆ ಬರಿಸಿದೆನು. ನಾಲ್ಕು ದಿವಸಗಳಲ್ಲಿ ಉತ್ತರವೂ ಬಂದಿತು. ಹೊರಡುವುದು ನಾಲ್ಕು ದಿವಸ ಉಳಿಯಿತು.

ನಾವು ಧಾರವಾಡಕ್ಕೆ ಹೋಗುವ ಸುದ್ದಿಯು ಊರಲ್ಲೆಲ್ಲ ಹರಡಿತು. ಎಷ್ಟೋ ಜನರು ಬಂದು ಮಾತಾಡಿಸಿ ಹೋದರು. ಬಡತನ ಬಂದುದರಿಂದ ಜನರು ನನ್ನನ್ನು ತಿರಸ್ಕರಿಸುವರೆಂದು ತಿಳಿದುದು ಸುಳ್ಳೆನಿಸ ತೊಡಗಿತು. ಊರವರೆಲ್ಲ ನಮ್ಮ ವಿಯೋಗಕ್ಕಾಗಿ ಮಮ್ಮಲ ಮರುಗಿದರು ನಮ್ಮ ಕುಂದುಕೊರತೆಗಳು ಅವರ ಕಣ್ಮರೆಯಾದುವು. ಹೊಂದಿಕೊಂಡಿರುವ ಸಮಾಜದಲ್ಲಿ ಪ್ರತಿಯೊಬ್ಬ ವ್ಯಕ್ತಿಗೂ ಒಂದು ಸ್ಥಾನವಿರುತ್ತದೆ. ಕೆಲವೆಡೆಯಲ್ಲಿ ಕಣ್ಮರೆಯಾದ ಬಳಿಕ ಆ ವ್ಯಕ್ತಿಯ ಮಹತ್ವ ತಿಳಿಯುವುದು! ಒಬ್ಬಿಬ್ಬರು ನಮ್ಮನ್ನು ಊಟಕ್ಕೆ ಕರೆದು ಸತ್ಕರಿಸಿದರು. ಕೆಲವರು ಹೆಂಡತಿಯನ್ನು ಕರೆದು ಖಣಕಾಯಿ ಉಡಿತುಂಬಿ ಕಳುಹಿದರು; ಕೆಲವರು ಮೊರದ ಬಾಗಿಣ ಕೊಟ್ಟರು. ಎಳೆ ಸಿಕ್ಕರೆ ಹಚ್ಚಡ ನುಂಗುವುದು ಹೆಂಡತಿಯ ಸ್ವಭಾವ. ಅವಳು ಉಳಿದವರೆಡೆಗೆ ಭೆಟ್ಟಿಗೆಂದು ಹೋಗಿ ಖಣ ತೆಗೆದುಕೊಂಡು ಬಂದಳು.

ಮನೆಯಲ್ಲಿ ಭಾಂಡಿ ಮೊದಲಾದ ಪದಾರ್ಥಗಳನ್ನೆಷ್ಟೆಷ್ಟು ಒಯ್ಯಬೇಕೆಂಬ ವಿಚಾರ ನಡದೆಯೇ ಇದ್ದಿತು. ಹೊರಡಲಿಕ್ಕೆ ಒಂದೇ ದಿವಸ ಉಳಿಯಿತು. ಹೆಂಡತಿಯು ಎಲ್ಲ ಸಾಮಾನಗಳನ್ನು ಪಡಿಸಾಲೆ

ಯಲ್ಲಿರಿಸಿ ಗಂಟು ಕಟ್ಟುವಳು, ಮತ್ತೆ ಮತ್ತೆ ಬಿಚ್ಚಿ, ಅದರೊಳಗಿಂದ ಇದರೊಳಗೆ, ಇದರೊಳಗಿಂದ ಅದರೊಳಗೆ ಹಾಕುವಳು. ಪಾತ್ರೆಗಳನ್ನು ಗೋಣಿಯ ಚೀಲದಲ್ಲಿ ಹಾಕುವಳು, ತೆಗೆಯುವಳು, ಮತ್ತೆ ಹಾಕುವಳು. ಮಕ್ಕಳು ತಂತಮ್ಮ ಅರಿವೆಯಂಚಡಿ ಸಿಂಪುಬಿನಕ ಇವುಗಳನ್ನು ಹಾಕಿ ತಲೆಗೊಂದು ಗಂಟು ಕಟ್ಟಿಕೊಂಡರು. ಅಷ್ಟರೊಳಗೆ ನಾರಾಯಣನು ಬಂದು ಗಂಟುಚೀಲಗಳ ಹತ್ತರಿರುವ ನಾಲ್ಕು ನಾಲ್ಕು ಊದುಗೊಳವೆ ಹುಟ್ಟು ಲಟ್ಟಣಿಗಳು, ಮೂರು ಮೂರು ಪಾಳಿ, ಹೋಳಿಗೆಮಣೆ, ಕಲ್ಲುಗಡಿಗೆ ಕಲ್ಲುಪರಟೆಗಳು, ಎರಡೆರಡು ಓರೊಳಗೆ, ತೆಂಗಿನ ಮತ್ತು ಮದಿಯ ಹಿಡಿಗಳು, ಒಂದು ಅರಳ ಹಿಟ್ಟಿನ ಗಡಿಗೆ, ಇವುಗಳನ್ನು ನೋಡಿ, ' ಲಕ್ಷ್ಮಂಬಾಯಿಯವರೆ, ಇವನ್ನೆಲ್ಲ ಊರಿಗೆ ಒಯ್ಯಲಿಕ್ಕೆ ಇಟ್ಟಿರುವಿರಾ ? ' ಎಂದು ಕೇಳಲು, ಹೆಂಡತಿಯು, ' ಇವುಗಳ ಉಪಯೋಗವೇನು ಗಂಡಸರಿಗೆ ಗೊತ್ತು? ಚಪ್ಪೆಗಾಲು ಹಾಕಿ ಊಟ ಮಾಡುವವರು! ಇವುಗಳಲ್ಲಿ ಒಂದಿಲ್ಲವಾದರೆ ಮನೆಗೆಲಸಕ್ಕೆ ಕಟ್ಟು, ಊಟಕ್ಕೆ ತಡೆ ' ಎಂದಳು. ನಾರಾಯಣನು, ' ಇವುಗಳ ಬೆಲೆಗಿಂತ ಇವುಗಳನ್ನು ಧಾರವಾಡಕ್ಕೆ ಒಯ್ಯುವ ಖರ್ಚೇ ಹೆಚ್ಚಾಗುತ್ತದೆ. ಅಲ್ಲಿ ಇಂತಹ ಸಾಮಾನು ದೊರೆಯುವುದಿಲ್ಲವೆಂದು ತಿಳಿದಿರುವಿರೋ ? ಎಂದು ಕೇಳಿದುದಕ್ಕೆ ಅವಳು ' ಹೇಗಾದರು ಮನೆಯಲ್ಲಿವೆ. ಅಲ್ಲಿ ಹೋಗಿ ಮತ್ತೆ ಕೊಳ್ಳುವುದೇಕೆ ? ಎಂದು ಪ್ರಶ್ನೆ ಮಾಡಿದಳು. ಅದಕ್ಕೆ ನಾರಾಯಣನು, ' ದಾರಿಯಲ್ಲಿಯೆ ಕಲ್ಲುಗಡಿಗೆ ಮಣ್ಣುಗಡಿಗೆಗಳು ಒಡೆದು ಹೋಗುವುವು ' ಎಂದನು. ನಾನು ' ಹೆಣ್ಣುಮಕ್ಕಳಲ್ಲಿ ಬುದ್ಧಿ ಕಡಿಮೆ. ಕಲ್ಲುಗಡಿಗೆ ಕಲ್ಲುಪರಟೆಗಳ ಮೇಲೆ ಅವರ ಪ್ರೀತಿ ಬಹಳ. ಸಾಕಷ್ಟು ಪಾತ್ರೆಗಳಿದ್ದರೂ ಮನೆಯೊಳಗಿನ ಕಾಳು, ಮೈಮೇಲಿನ ವಸ್ತ್ರಗಳನ್ನು ಕೊಟ್ಟು ಅವುಗಳನ್ನು ಕೊಂಡುಕೊಳ್ಳುವರು. ಅವು ಅವರ ಜೊತೆಯಲ್ಲಿಯೇ ಇರಬೇಕು. ಒಡೆದರೂ ಚಿಂತೆಯಿಲ್ಲ ! ' ಎಂದುದಕ್ಕೆ ಅವಳು ಸಿಟ್ಟಾಗಿ, ಎಲ್ಲ ಪದಾರ್ಥಗಳನ್ನು ಒಳಗೆ ಇಡಲಿಕ್ಕೆ ಹೋಗುವುದನ್ನು ಕಂಡು ನಾರಾಯಣನು, ' ಲಕ್ಷ್ಮಂಬಾಯೀ ಒಂದೊಂದು ಸಾಮಾನು ಇಟ್ಟು ಕೊಳ್ಳಿರಿ,

ಆ ಗಡಿಗೆ ಮಾತ್ರ ಮನೆಯಲ್ಲಿರಲಿ' ಎಂದುದಕ್ಕೆ ಅವಳು ಎರಡೆರಡನ್ನಿಟ್ಟು ಉಳಿದವುಗಳನ್ನು ಒಳಗಿರಿಸಿದಳು. ನಾರಾಯಣನೇ ಹುಡುಗರ ಗಂಟುಗಳನ್ನು ಬಿಚ್ಚಿ ಅವಶ್ಯಕವಾದುವುಗಳನ್ನು ದೊಡ್ಡ ಗಂಟುಗಳಲ್ಲಿ ಹಾಕಿ ಗಂಟುಗಟ್ಟಿದನು. ಬಳಿಕ ನಾನು, 'ನಾರಾಯಣಾ ನೀನೂ ನಮ್ಮ ಜೊತೆಗೆ ಬಂದರೆ ಒಳಿತಾಗುವುದು,' ಎಂದುದಕ್ಕೆ ಅವನು, 'ನಾನೂ ಅದನ್ನೇ ವಿಚಾರಿಸುತ್ತಲಿದ್ದೇನೆ. ನಾಳೆ ಪ್ರಾತಃಕಾಲ ಏನೆಂಬುದನ್ನು ಹೇಳುವೆನು,' ಎಂದು ನುಡಿದು ತನ್ನ ಮನೆಗೆ ಹೊರಟುಹೋದನು.

ನಾರಾಯಣನು ಬಂದು 'ಹೇಗಾದರು ನನಗೆ ಸಂಚಾರಕ್ಕೆ ಹೊರಡಬೇಕಾಗಿದೆ. ಹಾವೇರಿ ರಾಣೆಯಬಿನ್ನೂರುಗಳಿಗೆ ಹೋಗಬೇಕೆಂದು ಮಾಡಿದ್ದೇನೆ. ಧಾರವಾಡವು ಅದೇ ದಾರಿಯಲ್ಲಿದೆ. ನಾನೂ ನಿಮ್ಮ ಸಂಗಡ ಬಂದು ಬಿಡುವೆನು' ಎಂದ ಕೂಡಲೆ ನನಗೆ ಕೊಂಚ ಧೈರ್ಯ ಬಂದಿತು. ಮಧ್ಯಾಹ್ನ ಊಟ ತೀರಿಸಿಕೊಂಡು ಹೊರಡುವುದು ಗೊತ್ತಾಯಿತು. ಹೆಂಡತಿಗೆ 'ತೀವ್ರ ಅಡುಗೆ ಮಾಡಿಬಿಡು' ಎಂದು ಹೇಳುವಷ್ಟರಲ್ಲಿ ಜೀವೂಬಾಯಿಯವರು ನಮ್ಮೆಲ್ಲರಿಗೆ ಔತಣ ಕೊಟ್ಟರು. ನಾವು ಒಲ್ಲೆಂದರೂ ಅವರ ಆಗ್ರಹ ಬಹಳವಾಯಿತು. ನಾರಾಯಣನಿಗೂ ಅಲ್ಲಿಯೇ ಊಟಕ್ಕೆ ಹೇಳಿದರು. ಹೆಂಡತಿಗೆ ವೇಳೆ ದೊರೆತುದರಿಂದ, ಅವಳು ಉಳಿದ ಒಂದೆರಡು ಮನೆಯವರನ್ನೂ ಕಂಡು ಮಾತಾಡಿ ಋಣ ಎತ್ತಿಕೊಂಡೇ ಬಂದಳು. ನಾವಿಬ್ಬರೂ ದಮ್ಮಿಯನ್ನು ಕೃಷ್ಣಾಚಾರ್ಯರ ಮನೆಗೆ ಕರೆದೊಯ್ದು ಅವರಿಂದ ಅವಳನ್ನು ಧಾರವಾಡಕ್ಕೆ ಕರೆದುಕೊಂಡು ಹೋಗಲಿಕ್ಕೆ ಅಪ್ಪಣೆ ಪಡೆದೆವು. ನಾನು ದಮ್ಮಿಯ ಮೈಮೇಲಿನ ವಸ್ತ್ರಗಳನ್ನು ತೆಗೆಯಿಸಿ, 'ಆಚಾರ್ಯರೆ, ಇಕ್ಕೊಳ್ಳಿರಿ ನಿಮ್ಮ ಒಡವೆಗಳನ್ನು; ಪ್ರವಾಸದ ಕೆಲಸ; ಮೇಲಾಗಿ ಧಾರವಾಡ ಅಪರಿಚಿತ ಸ್ಥಳ. ಇವುಗಳನ್ನು ಒಯ್ಯುವುದಕ್ಕೆ ನನ್ನ ಧೈರ್ಯ ಸಾಲದು,' ಎಂದಿಟ್ಟ ಕೂಡಲೆ, ಕೃಷ್ಣಾಚಾರ್ಯರು

ಒಂದೂ ಮಾತಾಡದೆ ಸರಿಸಿಕೊಂಡು ಬಿಟ್ಟರು. ಆದುದರಿಂದ ಅವರು ತಮ್ಮ ವಸ್ತ್ರಗಳ ವಿಚಾರದಲ್ಲಿಯೆ ಬಿದ್ದಿದ್ದ ಹಾಗೆ ತೋರಿತು.

ಮಧ್ಯಾಹ್ನದಲ್ಲಿ ಊಟ ತೀರಿಸಿ ಮನೆಗೆ ಹೋಗುವಷ್ಟರಲ್ಲಿ ಸಾತಪ್ಪನು ಬಂಡಿಯನ್ನು ಸವಾರಿ ಕಟ್ಟಿ ಸಿದ್ಧಗೊಳಿಸಿ ಮನೆಯ ಮುಂದೆ ನಿಲ್ಲಿಸಿದ್ದನು. ನಾರಾಯಣನೂ ತನ್ನ ಹಸಿಬೆಯನ್ನು ಹೊತ್ತುಕೊಂಡು ಬಂದನು. ಸಾಮಾನುಗಳನ್ನು ಹಾಕಿ ಮಕ್ಕಳನ್ನು ಕುಳ್ಳಿರಿಸಿ ಬಂಡಿಯನ್ನು ನದಿಯ ಆಚೆಯ ದಂಡೆಗೆ ಹೊಡೆದು ನಿಲ್ಲಿಸೆಂದು ಹೇಳಲಾಗಿ ಅವನು ಅದನ್ನು ಹೊಡೆದುಕೊಂಡು ಹೋದನು. ಮನೆಯ ಮುಂದೆ ಊರವರೆಲ್ಲರು ನೆರೆದು ನಮಗೆ ನಮಸ್ಕರಿಸಿ ಹೋಗಿ ಬನ್ನಿರೆಂದು ಬೀಳ್ಕೊಟ್ಟರು. ನಾವಿಬ್ಬರು ಗುಡಿಯ ಕಡೆಗೆ ಹೊರಟ ಕೂಡಲೆ ಕೆಲವರು ನಮ್ಮ ಸಂಗಡವೇ ಬಂದರು. ನಾವಿಬ್ಬರೇ ಗುಡಿಯನ್ನು ಸೇರಿದೆವು. ನಾನು ಕೈಜೋಡಿಸಿ, ಕಣ್ಮುಚ್ಚಿ ದೇವರ ಮುಂದೆ ಧ್ಯಾನಿಸುತ್ತ ನಿಂತೆನು. ಹೆಂಡತಿಯೂ ನನ್ನ ಬದಿಯಲ್ಲಿ ನಿಂತಿದ್ದಳು. ನನ್ನ ಎದೆ ತುಂಬಿ ಬಂದಿತು, ಕಂಠ ಬಿಗಿಯಿತು. ಗದ್ಗದಿತ ದನಿಯಿಂದ ನಾನು, ' ದೇವರೇ ನೀನು ದಯಾಪರನು; ನಾನು ದೀನನು. ನೀನು ಭಕ್ತವತ್ಸಲನು; ನಾನು ನಿನ್ನ ಏಕಾಂತ ಭಕ್ತನು. ನಿನ್ನನ್ನು ಮೊರೆಹೊಕ್ಕ ಮಗುವನ್ನು ಕಾಪಾಡಿದೆ. ಪರಮಾತ್ಮನೇ ನನ್ನ ಮಕ್ಕಳು ಮರಿಗಳನ್ನು ಕಾಪಾಡುವ ಭಾರ ನಿನ್ನ ಮೇಲೆ,' ಎಂದನ್ನುವಾಗ ಕಣ್ಣೀರು ಸುರಿಯಲಾರಂಭಿಸಿತು; ಮೈ ಕಂಪಿಸತೊಡಗಿತು. ನನ್ನ ಮನದಳವನ್ನು ತಿಳಿದು ಹೆಂಡತಿಗೂ ಹೊಟ್ಟೆಯೊಳಗಿನ ಕಳವಳ ಉಕ್ಕೇರಿ ಕಣ್ಣಿನಿಂದ ಹನಿಯಾಗಿ ಉದುರಲಾರಂಭಿಸಿತು. ಅರ್ಚಕನು ಕಾಯೊಡೆದು ಮಂಗಳಾರತಿ ಮಾಡಿ ನನಗೂ ಹೆಂಡತಿಗೂ ಮಂತ್ರಾಕ್ಷತೆಯೊಂದಿಗೆ ಒಂದೊಂದು ಬಟ್ಟಲ ಉಡಿಯಲ್ಲಿ ಹಾಕಿದನು. ನರಸಿಂಹನನ್ನು ಬಲಗೊಂಡು ನದಿಯಲ್ಲಿಳಿದೆವು. ದಂಡೆಯಲ್ಲಿ ನಮ್ಮ ದಾರಿಯನ್ನು ನೋಡುತ್ತ ಜನರು ನೆರೆದೆಯೇ ಇದ್ದರು. ಅವರಿಗೆ ನಮಸ್ಕರಿಸಿ ಹೊರಟೆವು. ಒಬ್ಬ ಮುತ್ತೈದೆಯು ' ಲಕ್ಷ್ಮಂಬಾಯೀ ಹೋಗಿ ಬಾ; ನಿನ್ನ ಮಗ ಮಾಮಲೇದಾರನಾಗು

ವನು, ಫೌಜದಾರನಾಗುವನು' ಎಂದು ಹರಸಿದುದು ನನ್ನ ಕಿವಿಗೆ ಬಿದ್ದಿತು. ನದಿ ದಾಟಿ ಮತ್ತೊಮ್ಮೆ ದೇವಸ್ಥಾನಕ್ಕೆ ವಂದನೆಮಾಡಿ ಬಂಡಿಯನ್ನೇರಿದೆವು.

ನಾನು—'ಪ್ರತಿದಿವಸದ ಪರಿಚಯದಿಂದ ಕೆಲ ವಿಷಯಗಳ ಮಹತ್ವ ತಿಳಿಯುವುದಿಲ್ಲ. ಅವುಗಳಿಗೆ ಎರವಾದ ಬಳಿಕ ಆ ಬಗ್ಗೆ ಯೋಗ್ಯ ಕಲ್ಪನೆ ತಲೆದೋರುವುದು. ದಿವಸಕ್ಕೆರಡು ಸಲವಾದರೂ ಆಗುವ ನರಸಿಂಹನ ದರ್ಶನವು ದುರ್ಲಭವಾಯಿತು. ತಾಯಿ ಕೃಷ್ಣಾ ಬಾಯಿಯ ಪವಿತ್ರ ನೀರಿನ ಸ್ನಾನವು ನಿಂತು ತೋಟಿಯೊಳಗಿನ ಕೊಳೆ ನೀರಿನ ಜಳಕ ಮಾಡುವ ಬಾರಿ ಬಂದಿತು. ದಿನವೊಂದಕ್ಕೆ ದೃಷ್ಟಿಗೆ ಬೀಳುವ ಬೀಗಬಿಜ್ಜರು ಆಪ್ತೇಷ್ಟರು ಮಿತ್ರರು ಇವರ ಭೆಟ್ಟಿ ಅಪರೂಪವಾಯಿತು. ಹೊಗಳಲಿ ತೆಗಳಲಿ ವೇಳೆ ಬಂದಾಗ ಅನುವು ಆಪತ್ತುಗಳಲ್ಲಿ ಸಹಾಯ ಮಾಡಬಲ್ಲ ಬಾಂಧವರು ದೂರಾದರು. ನಾರಾಯಣಾ, ಶೂರ್ಪಾಲಿಯ ಮಹತ್ವ ನನಗೆ ಈಗ ತಾನೆ ತಿಳಿಯಲಾರಂಭಿಸಿತು! ಮಕ್ಕಳ ಶಿಕ್ಷಣಾ ಪೂರ್ತಿಗೊಳುವುದೆಂದು? ಅವರು ಕಲಿತು ಕೆಲಸ ಹಿಡಿದು ಸುಖದಿಂದ ಸಂಸಾರ ಮಾಡುವುದನ್ನು ನೋಡುವುದೆಂದು? ಮಕ್ಕಳು ಸೊಸೆಯಂದಿರೊಂದಿಗೆ ಶೂರ್ಪಾಲಿಗೆ ಮರಳಿ ಬರುವುದೆಂದು? ಮಾತಾಪಿತೃಗಳಾದ ನಮ್ಮಿರ್ವರ ಕಳೇವರಗಳ ಕೊನೆಯ ಸಂಸ್ಕಾರವು ಕೃಷ್ಣೆಯ ತಡಿಯಲ್ಲಿ ನರಸಿಂಹನ ಅಡಿಯಲ್ಲಿ ತೀರುವುದೆಂತು!

ನಾರಾ—ಕಾಲನ ಉದರದಲ್ಲಿರುವುದು ಮಾನವನಿಗೆ ತೋರುವುದಿಲ್ಲ. ಮನುಷ್ಯನು ಪರಿಸ್ಥಿತಿಗೆ ತಕ್ಕಂತೆ ನಡೆಯುವ ಪ್ರಾಣಿ. ಪರಿಸ್ಥಿತಿ ಬದಲಾದಂತೆ ಅವನ ಭಾವನೆಗಳಲ್ಲಿಯೂ ಬದಲಾವಣೆಯಾಗುತ್ತದೆ. ಧಾರವಾಡದಲ್ಲಿ ನೆಲೆನಿಂತು ಕೆಲಕಾಲ ಗತಿಸಿತೆಂದರೆ, ಆ ಸ್ಥಳದಿಂದ ಕದಲುವುದೂ ಇಷ್ಟೇ ಜಡವೆನಿಸುವುದು. ಭಾವನೆಗೆ ವಶವಾಗಿ ಧೈರ್ಯ ಕಳೆದುಕೊಳ್ಳಬೇಡಿರಿ. ನಿಮ್ಮ ಆಕಾಂಕ್ಷೆಗಳನ್ನು ಪೂರ್ತಿಗೊಳಿಸಲು ನರಸಿಂಹನು ಸಮರ್ಥನಿದ್ದಾನೆ.

ನಾ—ನಾರಾಯಣಾ, ಮಕ್ಕಳಿದ್ದರು ಚಿಂತೆ, ಇಲ್ಲದಿದ್ದರು ಚಿಂತೆ, ಮಾನವನಿಗೆ ಅನುಗಾಲ ಚಿಂತೆ ತಪ್ಪಿದುದಿಲ್ಲ. ಮಕ್ಕಳಿಲ್ಲದ ಚಿಂತೆಯನ್ನು ನರಸಿಂಹನ ಆರಾಧನೆ ಮಾಡಿ ದೂರಮಾಡಿಕೊಂಡೆನು. ಆದರೆ ಅವರ ಪಾಲನಪೋಷಣೆಯ ವಿವಂಚನೆಯ ಡಳ್ಳುರಿಯಲ್ಲಿ ಬೇಗುದಿಗೊಂಡು ಹೊಳಲು ಬಿಟ್ಟು ಹಳುವ ಸೇರುತ್ತಿರುವೆನಲ್ಲ? ನಮ್ಮ ಮಕ್ಕಳ ಗತಿಯೇನು? ನಮ್ಮ ಗತಿಯೇನು!

ನಾರಾ—ಆಚಾರ್ಯರೆ, ಇಷ್ಟೇಕೆ ಅಂಜಿರುವಿರಿ. ಧಾರವಾಡವು ಯಜಮಾನರ ಆಗರ. ಅಲ್ಲಿ ನಿತ್ಯ ಹವ್ಯಕವ್ಯಗಳು ನಡೆದೆಯೇ ಇರುತ್ತವೆ. ಶೂರ್ಪಾಲಿಯಲ್ಲೇನಿದೆ? ಧಾರವಾಡದಲ್ಲಿ ಪ್ರಾಪ್ತಿಯಂತೆ ಖರ್ಚು ಹೆಚ್ಚಾಗಿದ್ದರೂ ಪ್ರಾಪ್ತಿಯೆಂಬುವುದಿದೆ.

ನಾ—ಧಾರವಾಡದಲ್ಲಿ ನಾನು ಅಪರಿಚಿತನು. ಮೇಲಾಗಿ ನನಗೆ ಯಾಜ್ಞಿಕಮಂತ್ರ ಬರುವುದಿಲ್ಲ. ಯಜಮಾನರ ಮನೆಗೆ ಹೋಗಿ ವ್ಯರ್ಥ ಮಾತು ಬಳೆಯಿಸಿ, ಮುಖಸ್ತುತಿ ಮಾಡಿ ಮನವೊಲಿಸುವ ಕಸಬು ನನಗೆ ಗೊತ್ತಿಲ್ಲ. ಮೇಲಾಗಿ, ಇದು ಹೀಗೆಯೆ ಇರಬೇಕು, ಅದು ಹಾಗೆಯೆ ಆಗಬೇಕು, ಎಂಬ ಚಲವು ನನ್ನ ಸ್ವಭಾವದಲ್ಲಿದೆ.

ನಾರಾ—ಹಾಗಾದರೆ ಕೇಳಿರಿ, ಎರಡು ಬಗೆಯ ವೈದಿಕರಿಗೆ ಧಾರವಾಡದಲ್ಲಿ ಅನ್ನವಿದೆ. ವಿದ್ಯಾವಂತರಾದವರು ಯಾರ ಗೋಜಿಗೂ ಹೋಗದೆ ಪಾಠಪ್ರವಚನ ಪುರಾಣ ಪುಣ್ಯಕಥೆಗಳನ್ನು ಸರಸವಾಗಿ ಹೇಳಿ ವಿದ್ಯಾಭಿರುಚಿಯುಳ್ಳ ಯಜಮಾನರಿಂದ ಪೋಷಣೆ ಪಡೆಯುವರು. ಇಂತಹರದೊಂದು ಪಂಗಡ. ಯಜಮಾನ ಯಜಮಾನತಿಯರಿಗೆ ಅನುಕೂಲರಾಗಿ ಅವರ ಕಾರ್ಯಗಳನ್ನು ವೇಳೆಗೆ ಸರಿಯಾಗಿ ಸಾಗಿಸಿ ಅವರಿಂದ ಮನ್ನಣೆ ಹೊಂದುವವರು ಎರಡನೆಯ ಪಂಗಡದವರು. ಅಷ್ಟೊಂದು ಮಂತ್ರ ಮೊದಲಾದುವುಗಳು ಬರದಿದ್ದರೂ ಈ ತಂತ್ರವನ್ನನುಸರಿಸುವ ಆಶ್ರಿತನಂತಹ ಭಾಗ್ಯವಂತನು ಮತ್ತಾವನೂ ಇಲ್ಲ. ಈ ಎರಡೂ ಗುಣಗಳಿಲ್ಲದವರಿಗೆ ಅವರ ಕೈಯೊಳಗಿನ ತಂಬಿಗೆಯೆ ತುಂಬ ಸಾಧನ.

ಇವೇ ಮೊದಲಾದ ಮಾತುಗಳು ನಡೆಯುವಷ್ಟರಲ್ಲಿ ಜಂಬು ಕಂಡಿಯು ಸಮಾಪಿಸಿತು. ಆಗ ಹೆಂಡತಿಯು, 'ನಾರಾಯಣಾ ಚಾರ್ಯರೆ, ಸಿಹಿ ನೀರಿದ್ದ ಸ್ಥಳ ನೋಡಿರಿ, ಹೋದ ಕೂಡಲೆ ಅಡುಗೆ ಮಾಡುವೆನು,' ಎಂದಳು. ನಾರಾಯಣನು, 'ಕೃಷ್ಣಾಚಾರ್ಯರು ಆಗ್ರಹ ಮಾಡಿ ಹೋಳಿಗೆ ಹಾಕಿಸಿದರು. ಕಣಕ ಉಂಡಿದ್ದೇನೆ. ಸಂಜೆಗೆ ಹಸಿವಿಲ್ಲ. ಊರಲ್ಲಿ ವೆಂಕಟರಮಣನ ಗುಡಿ ಪ್ರಶಸ್ತವಾಗಿದೆ, ಅಲ್ಲಿ ಸಿಹಿನೀರಿನ ಭಾವಿಯಿದೆ, ಅಡುಗೆ ಮಾಡಲು ಅನುಕೂಲವಿದೆ.' ಎಂದು ಉತ್ತರವನ್ನಿತ್ತನು. ನನಗೂ ಹಸಿವು ಇಲ್ಲವೆಂದು ಹೇಳಿದೆನು. ಹೆಂಡತಿಯು, 'ನಾನೂ ಊಟಮಾಡುವುದಿಲ್ಲ. ಜೀವೂಬಾಯಿಯ ವರು ಮಕ್ಕಳಿಗೆ ಬುತ್ತಿಯನ್ನು ಕಟ್ಟಿಕೊಟ್ಟಿದ್ದಾರೆ. ಹಿರಿಯರಷ್ಟು ಫಲಾಹಾರ ಮಾಡಿದರಾಯಿತು' ಎಂದಳು. ಬಂಡಿಯು ಅಗಸೆಗೆ ಬಂದಿತು. ಸಾತಪ್ಪನಿಗೆ ವೆಂಕಟರಮಣನ ಗುಡಿಗೆ ಬಂಡಿಯನ್ನು ಹೊಡೆಯಲಿಕ್ಕೆ ಹೇಳಿದೆವು. ಸಾಮಾನುಗಳನ್ನು ಗುಡಿಯಲ್ಲಿರಿಸಿದ ಬಳಿಕ ಹೆಂಡತಿಯು ಹುಡುಗರಿಗೆ ಬುತ್ತಿಯನ್ನು ಹಾಕಿ ನಮಗೆ ಅರಳ ಹಿಟ್ಟು ಅವಲಕ್ಕಿಯ ಫಲಾಹಾರ ಹಾಕಿ ತಾನೂ ತಿಂದಳು. ಎಲ್ಲರೂ ಮಲಗಿದೆವು. ಚಿಂತೆಗೊಳಗಾದ ನಾನು ರಾತ್ರಿಯನ್ನೆಲ್ಲ ಜಾಗರಣೆ ಯಲ್ಲಿಯೆ ಕಳೆದೆನು.

ಮರುದಿನ ಮುಂಜಾವಿನಲ್ಲಿ ಊಟವಾದೊಡನೆ ಸಾತಪ್ಪನು ಚಕ್ಕಡಿಗೆ ಕೊರಳು ಕಟ್ಟಿದನು. ಜಂಬುಕಂಡಿಯಿಂದ ಹೊರಟು ದಾರಿಯಲ್ಲಿ ಬನಹಟ್ಟಿ ರಬಕವಿಗಳನ್ನು ದಾಟಿ, ತೇರದಾಳದಲ್ಲಿ ರಾತ್ರಿ ವಸತಿ ಮಾಡಿ ಮುಂಜಾವಿನಲ್ಲಿ ಹೊರಟು ಸಂಜೆಯೊಳಗಾಗಿ ಕುಡಚಿಯ ಸ್ಟೇಶನವನ್ನು ತಲುಪಿದೆವು. ಅಲ್ಲಿರುವ ಪ್ರಶಸ್ತ ಧರ್ಮಶಾಲೆಯಲ್ಲಿ ಇಳಿದುಕೊಂಡೆವು. ಉಗೆಬಂಡಿಯು ಚುಮುಚುಮು ಮುಂಜಾವಿನಲ್ಲಿ ಧಾರವಾಡಕ್ಕೆ ಹೊರಡುವುದೆಂದು ಕೇಳಿ ರಾತ್ರಿ ಎಲ್ಲ ಸಾಮಾನುಗಳನ್ನು ಕಟ್ಟಿ ಸಿದ್ಧಪಡಿಸಿದೆವು. ದಾರಿಯ ದಣುವಿನಿಂದಲೊ, ಕಾಲಾವಧಿಯ ಪರಿಣಾಮದಿಂದಲೊ, ಆ ರಾತ್ರಿ ನನಗೆ ಗಾಢ ನಿದ್ರೆಹತ್ತಿತು. ನಾರಾ

ಯಣನು ಎಬ್ಬಿಸುವ ವರೆಗೆ ನನಗೆ ಎಚ್ಚರವೆ ಇರಲಿಲ್ಲ. ಹೆಂಡತಿಯು ಮಕ್ಕಳಿಗೆ ಫಲಾಹಾರ ಹಾಕುವಷ್ಟರಲ್ಲಿ ನಾನೂ ನಾರಾಯಣನೂ ಎಲ್ಲ ಸಾಮಾನುಗಳನ್ನು ಸ್ಟೇಶನ್ನಿಗೆ ಮುಟ್ಟಿಸಿದೆವು. ತಿಕೀಟು ತೆಗೆದು ಎಲ್ಲರೂ ಬಂದು ನಿಲ್ಲುವಷ್ಟರಲ್ಲಿ ಬಂಡಿಯು ಒದರಿತು. ಪೂಲು ದಾಟುವ ಸಪ್ಪಳವೂ ಕೇಳತೊಡಗಿತು. ಹೆಂಡತಿ ಮಕ್ಕಳು ಉಗೆಬಂಡಿಯನ್ನೇ ನೋಡಿರಲಿಲ್ಲ. ಅವರಲ್ಲಿ ಆತುರತೆ ಹೆಚ್ಚಾಗಿದ್ದಿತು. ಪೂಲನ್ನು ದಾಟಿ ಬಂಡಿಯು ಸಿಳ್ಳು ಹಾಕಿ, ತನ್ನೆಡೆಗೆ ಬರುತ್ತಿರುವುದನ್ನು ಕಂಡು, ಅವಳು ಮಕ್ಕಳನ್ನು ಹಿಡಿದುಕೊಂಡು ಕಕ್ಕಾವಿಕ್ಕಿಯಾಗಿ ನಿಂತಳು. ಬಂಡಿಯು ಆರ್ಭಟೆಯಿಂದ ಮುಂದೆ ಬಂದ ಕೂಡಲೆ ಮಕ್ಕಳು ಚಿಟ್ಟನೆ ಚೀರಿದರು. ನಾರಾಯಣನು ಅವರನ್ನು ಡಬ್ಬಿಯೊಳಗೆ ಮೊದಲು ಕಳುಹಿ, ಹಿಂದುಗಡೆಗೆ ಸಾಮಾನು ಹಾಕಿದನು. ನಾವೂ ಒಳಗೆ ಹೋದೆವು. ಬಂಡಿಯು ಕುಡಚಿಯನ್ನು ಬಿಟ್ಟಿತು.

## ೨ ನಗರಪ್ರವೇಶ.

ಧಾರವಾಡದ ಸ್ಟೇಶನ್ನಿನಲ್ಲಿ ಬಂಡಿಯು ಬಂದು ನಿಂತಿತು. ಎಲ್ಲರನ್ನು ಇಳಿಸಿ ಸಾಮಾನುಗಳನ್ನೂ ಕೆಳಗಿಟ್ಟೆವು. ನಾರಾಯಣನು ಹುಡುಗರನ್ನೂ ಹೆಂಡತಿಯನ್ನೂ ಮೊದಲು ಸಣ್ಣಪುಟ್ಟ ಸಾಮಾನುಗಳನ್ನು ಕೊಟ್ಟು ಕಳುಹಿದನು. ಬಳಿಕ ನಾವಿಬ್ಬರು ಉಳಿದವುಗಳನ್ನು ಹೊತ್ತುಕೊಂಡು ಹೊರಗೆ ಹೋದೆವು. ಹೆಂಡತಿಯು ಟಾಂಗಗಳನ್ನು ಗೊತ್ತುಮಾಡಬೇಕೆಂದು ಸೂಚಿಸಿದಳು. ಒಂದೊಂದು ಟಾಂಗಕ್ಕೆ ಹನ್ನೆರಡು ಆಣೆಗಳು ಬೀಳುವುದರಿಂದಲೂ ಸಾಮಾನುಗಳು ಒಂದರಲ್ಲಿಯೆ ಹೋಗುವಷ್ಟಿದ್ದಿಲ್ಲವಾದುದರಿಂದಲೂ ಒಂದೇ ಎಕ್ಕವನ್ನು ಗೊತ್ತುಪಡಿಸಿ, ನಾನು ಹಣಮನಾರಾಯಣರು ಕಾಲಿನಿಂದ ನಡೆದೆವು.

ಕೋಣನತಂಬಿಗೆಯ ರಾಯರ ಮನೆ ಮುಟ್ಟಲಿಕ್ಕೆ ಏಳು ತಾಸು ಹೊತ್ತಾಯಿತು. ವೆಂಕಟರಾಯರ ಪತ್ನಿ ಗಂಗಾಬಾಯಿಯವರು

ಹೊರಗೆ ಬಂದು ಹೆಂಡತಿಮಕ್ಕಳನ್ನು ಒಳಗೆ ಕರೆದೊಯ್ದರು. ನಮಗೂ ಸಾಮಾನು ಇಡುವ ಸ್ಥಳ ತೋರಿಸಿದರು. ನಾರಾಯಣನು ರಾಯರೆಲ್ಲಿರುವರೆಂದು ಕೇಳಿದುದಕ್ಕೆ ಅವರು, 'ಇಷ್ಟೊತ್ತಿನ ವರೆಗೆ ತಮ್ಮ ದಾರಿಯನ್ನು ನೋಡಿ ಕಚೇರಿಗೆ ಹೋದರು; ಹುಡಗರ ಊಟವಾಗಲಿ; ಅತ್ತಿಗೆಯವರು ನಿಮ್ಮ ಹಾದಿಯನ್ನೇ ನೋಡುತ್ತಿದ್ದಾರೆ. ಸ್ನಾನಕ್ಕೆ ಏಳಿರಿ. ಅಷ್ಟರಲ್ಲಿ ಅವರು ಅಡುಗೆ ಮಾಡುವರು,' ಎಂದರು. ಅಷ್ಟೊತ್ತಿನ ವರೆಗೆ ಅವರು ದಾರಿಕಾಯುತ್ತಿರುವುದನ್ನೂ ಮುಂದೆ ನಮಗಾಗಿ ಅಡುಗೆ ಮಾಡುವುದನ್ನೂ ಕೇಳಿ ನನಗೆ ಸಂಕೋಚವೆನಿಸಿತು. ಹೆಂಡತಿಯು ಮಕ್ಕಳಿಗೆ ಸ್ನಾನಕ್ಕೆ ಹಾಕಿ ತಾನೂ ಮೈ ತೊಳೆದುಕೊಂಡಳು. ತಾನೇ ಅಡುಗೆ ಮಾಡಬೇಕೆಂದು ಅಂದರೂ ಗಂಗಾಬಾಯಿಯವರು ಆಕೆಗೆ ಅಡುಗೆ ಹಚ್ಚಲಿಲ್ಲ. ಮಕ್ಕಳ ಊಟವಾಯಿತು. ಅವರಿಗೆ ತೋಟಿಯು ಸೋಜಿಗವಾಗಿ ಕಂಡುದರಿಂದ ಅದರ ಕಡೆಗೆಯೇ ಹೋಗುತ್ತಿರುವುದನ್ನು ಕಂಡು ಹೆಂಡತಿಯು ಅವರಿಗೆ ಸಿಟ್ಟು ಮಾಡತೊಡಗಿದಳು. ಗಂಗಾಬಾಯಿಯವರು 'ಮಕ್ಕಳಿಗೆ ನಾಲ್ಕು ದಿವಸ ತೋಟಗಳು ಸೋಜಿಗವಾಗಿ ತೋರುವುವು. ಆಡಲಿ, ಬಿಡಿರಿ, ಬಿಸಿಲಿನ ದಿವಸಗಳಿವೆ. ಅವರಿಗೇನು ಆಗುತ್ತದೆ' ಎಂದು ಮಕ್ಕಳನ್ನೇ ಸಮರ್ಥಿಸಿದರು. ನಮ್ಮ ಪೂಜೆ ಊಟಗಳಾಗುವವರೆಗೆ ಹತ್ತು ವರ್ಷದ ಪರಿಚಯವಿದ್ದಂತೆ ಗಳಿಬಿಳಿ ಮಾತಾಡಿ ಆತಿಥ್ಯಮಾಡಿದುದನ್ನು ಕಂಡು, ಮನಸ್ಸಿನಲ್ಲಿ, 'ಪಟ್ಟಣನಿವಾಸಿಗಳು ಆದರಾತಿಥ್ಯಮಾಡುವವರಲ್ಲ. ತಮ್ಮ ಬಿಗುವಿನಲ್ಲಿಯೆ ಇರುವವರು, ಎಂದು ಕೇಳಿದುದು ಸುಳ್ಳು. ಆದರಾತಿಥ್ಯದಲ್ಲಿ ಹೆಂಡತಿಗೆ ದೊರೆ ಯಾರೂ ಇಲ್ಲವೆಂಬುದು ಟೊಳ್ಳಾಯಿತು,' ಎಂದು ಅಂದುಕೊಂಡು ಗಂಗಾಬಾಯಿಯವರ ಉಪಚಾರ ನಯವಿನಯಗಳಿಂದ ಬೆರಗಾಗಿ ಹೋದೆನು.

ಊಟ ತೀರಿಸಿಕೊಂಡು ಕ್ಷಣಹೊತ್ತು ವಿಶ್ರಮಿಸಿ, ನಾರಾಯಣನೊಂದಿಗೆ ಒಂದೆರಡು ಬೀದಿಗಳಲ್ಲಿ ಬಾಡಿಗೆಯ ಮನೆ ನೋಡಿ ಅವುಗಳಲ್ಲಿ ತಿಂಗಳಿಗೆ ಮೂರು ರೂಪಾಯಿ ಬಾಡಿಗೆಯಿರುವ ಮನೆ ಚೆನ್ನಾಗಿರುವುದೆಂದು ಗೊತ್ತುಪಡಿಸಿದೆವು. ಬರುವಷ್ಟರಲ್ಲಿ ಹೆಂಡತಿಯು ಗಂಗಾ

ಬಾಯಿಯುವರೊಡನೆ ಹರಟೆಯನ್ನು ಹೊಡೆಯುತ್ತ ಕುಳಿತಿದ್ದಳು. ಹೆಂಡತಿಯನ್ನೂ ಕರೆದೊಯ್ದು ಆ ಮನೆ ತೋರಿಸಿದೆವು. ಅವಳೂ 'ಮನೆ ಚೆನ್ನಾಗಿದೆ, ಬಾಡಿಗೆ ಅಳತೆಯಲ್ಲಿದೆ' ಎಂದಳು. ಆ ಮನೆಯ ಯಜಮಾನನಿಗೆ, 'ನಾಳಿನ ದಿವಸ ಇರಲಿಕ್ಕೆ ಬರುವೆವೆ'ಂದು ತಿಳಿಸಿದೆವು.

ವೆಂಕಟರಾಯರು ಕಚೇರಿಯನ್ನು ತೀರಿಸಿಕೊಂಡು ಬರಲಿಕ್ಕೆ ಸಂಜೆಯಾಯಿತು. ಅವರು ಬಂದು ಕುಳಿತೊಡನೆ ನಾರಾಯಣನು ರಾಯರಿಗೆ ನನ್ನ ಪರಿಚಯ ಮಾಡಿಕೊಟ್ಟನು. ರಾಯರು, 'ಅಶ್ವತ್ಥಾಚಾರ್ಯರನ್ನು ನೋಡಿದ್ದೆನು. ಅವರಲ್ಲಿ ನಮ್ಮ ಹಿರಿಯರ ವಿಶ್ವಾಸ ಬಹಳ. ಆಚಾರ್ಯರು ಅದ್ವಿತೀಯ ವಿದ್ವಾಂಸರು. ಈಗಿನ ವೈದಿಕರೂ ಅಂತಹರೇ ಗೃಹಸ್ಥರೂ ಅಂತಹರೇ. ನಿಮ್ಮಂತಹರನ್ನು ಕಂಡು ಬ್ರಾಹ್ಮಣ್ಯವು ಇನ್ನೂ ಎಲ್ಲಿಯೋ ಮೂಲೆಯಲ್ಲಿ ಉಳಿದಿರುವುದೆಂದು ಹೇಳಬಹುದು,' ಎಂದುದು ಸ್ತುತಿಯೋ ನಿಂದೆಯೋ ಎಂಬುದು ನನಗೆ ತಿಳಿಯದಾಯಿತು. ನಾರಾಯಣನ ಕಡೆಗೆ ಬೆರಗಾಗಿ ನೋಡಿದೆನು. ಅವನು, 'ರಾಯರೆ ನೀವೆನ್ನುವುದು ನಿಜ. ನರಸಿಂಹಾಚಾರ್ಯರು ನಿತ್ಯ ಪುರಾಣ ಪುಣ್ಯಕಥೆಗಳನ್ನು ಹೇಳುತ್ತ ಹಿರಿಯರ ಪರಂಪರೆಯನ್ನು ಕಾಯ್ದುಕೊಂಡಿದ್ದಾರೆ. ಆದರೆ ಈ ದಿವಸಗಳು ವಿಪರೀತವಾಗಿವೆ. ಹೊಟ್ಟೆಗಾಗಿ ವೈದಿಕರಿಗೆ ಲೌಕಿಕ ವಿಷಯಗಳನ್ನು ಕೈಕೊಳ್ಳ ಬೇಕಾಗಿದೆ.' ಎಂದನು. ನಾನು ಧೈರ್ಯತಾಳಿ, 'ರಾಯರೆ ಹಣಮನ ಶಿಕ್ಷಣಕ್ಕಾಗಿ ತಮ್ಮ ಆಶ್ರಯದಲ್ಲಿ ಬಂದಿದ್ದೇನೆ. ಅವನು ಮುಲ್ಕೀ ಪರೀಕ್ಷೆಯಲ್ಲಿ ಪಾಸಾಗಿದ್ದಾನೆ. ಇಲ್ಲಿ ಓದುತ್ತ ಕುಳಿತವನೇ ಹಣಮನು, ಹಣಮಾ ಇತ್ತ ಬಾ,' ಎಂದೆನು. ಹಣಮನು ವಿನಯದಿಂದ ರಾಯರಿಗೆ ನಮಸ್ಕರಿಸಿ ಅವರ ಹತ್ತರ ಕುಳಿತನು.

ರಾಯರು—ಮಗು ಯಾವ ಪುಸ್ತಕವನ್ನು ಓದುತ್ತಿರುವೆ ?

ಹಣಮ—ಭೂಗೋಲ.

ರಾಯರು—ನೀನು ಓದುತ್ತಿರುವ ಪಾಠವಾವುದು ?

ಹ--ಪೃಥ್ವಿಯ ಆಕಾರ ಮತ್ತು ಅದರ ಗತಿಯ ಬಗ್ಗೆ.

ರಾ——ಮಗು! ಹೇಳು ನೋಡುವಾ. ಪೃಥ್ವಿಯ ಆಕಾರವೆಂತಹದು? ಅದು ಯಾವ ಆಧಾರದ ಮೇಲೆ ನಿಂತಿರುವುದು? ಹಗಲು ರಾತ್ರಿಗಳು ಹೇಗಾಗುತ್ತವೆ? ವರ್ಷವೆಂದರೇನು?

ಹ—ಪೃಥ್ವಿಯು ಕಿತ್ತಿಳೆಯ ಆಕೃತಿಯದಿರುವುದು. ಸೂರ್ಯ ಚಂದ್ರ ಮೊದಲಾದ ಗ್ರಹಗಳ ಆಕರ್ಷಣದಿಂದ ಅದು ಅಂತರಿಕ್ಷದಲ್ಲಿ ಚಲಿಸುತ್ತ ನಿಂತಿರುತ್ತದೆ. ಪೃಥ್ವಿಗೆ ದೈನಂದಿನ ಗತಿಯೆಂತಲೂ ವಾರ್ಷಿಕ ಗತಿಯೆಂತಲೂ ಎರಡು ಗತಿಗಳುಂಟು. ಭೂಗೋಲವು ತನ್ನ ಸುತ್ತ ತಾನೇ ತಿರುಗಿ ಒಂದು ಪ್ರದಕ್ಷಿಣೆಯನ್ನು ಇಪ್ಪತ್ತು ನಾಲ್ಕು ತಾಸಿನಲ್ಲಿ ಮುಗಿಸುತ್ತದೆ. ಸೂರ್ಯನ ಕಡೆಗೆ ನೇರೆಯಾಗಿರುವ ಭೂಭಾಗದಲ್ಲಿ ಬೆಳಕಿರುತ್ತದೆ. ಹಿಂದಿನ ಅರ್ಧ ಭಾಗದಲ್ಲಿ ಕತ್ತಲೆಯಾಗುತ್ತದೆ. ಹನ್ನೆರಡು ತಾಸು ಬೆಳಕಿದ್ದಾಗ ಹಗಲೆನ್ನುವೆವು; ಕತ್ತಲಿದ್ದಾಗ ರಾತ್ರಿಯೆನ್ನುವೆವು. ಹೀಗೆಯೆ ತನ್ನ ಸುತ್ತಲು ತಿರುಗುತ್ತ ತಿರುಗುತ್ತ ಪೃಥ್ವಿಯು ಸೂರ್ಯನ ಸುತ್ತಲು ಪ್ರದಕ್ಷಿಣೆ ಹಾಕುತ್ತದೆ. ಈ ಪ್ರದಕ್ಷಿಣೆ ಮುಗಿಯಲಿಕ್ಕೆ ೩೬೫ ದಿವಸಗಳು ಹಿಡಿಯುತ್ತವೆ. ಆ ಅವಧಿಗೆ ಒಂದು ವರ್ಷವೆಂದು ಅನ್ನುತ್ತೇವೆ.

ನಾನು—ರಾಯರೆ, ಈಗಿನ ಶಿಕ್ಷಣದಿಂದ ಇಂತಹ ವಿಚಾರಗಳೇ ಮಕ್ಕಳ ತಲೆಯಲ್ಲಿ ಸೇರುತ್ತಿರುವುದರಿಂದ, ನನಗೆ ಕೊಂಚ ತಡೆಯು ಬೇಕಾಯಿತು. ಆದರೂ ಮಾಡುವುದೇನು? ಹೊಟ್ಟೆಗಾಗಿ ಈ ಶಿಕ್ಷಣ ಕೊಡಿಸಬೇಕಾಗಿದೆ. ಮನೆಯಲ್ಲಿ ಹಣಮುನಿಗೆ ನಮ್ಮ ವಿದ್ಯೆಯನ್ನೂ ಕಲಿಸುವೆನು. ಅವನು ಇನ್ನೂ ಚಿಕ್ಕವನಿದ್ದಾನೆ. ಪುರಾಣದೊಳಗಿನ ಮಾತು ಅವನಿಗೇನು ಗೊತ್ತು! ಈ ಭೂಗೋಲವು ಸಹಸ್ರ ಹೆಡೆಯುಳ್ಳ ವಾಸುಕಿಯ ಮೇಲೆ ಸರ್ಷಪಪ್ರಾಯವಾಗಿ ನಿಂತಿರುವುದು. ವಾಸುಕಿಯು ಅಷ್ಟದಿಗ್ಗಜಗಳನ್ನವಲಂಬಿಸಿ ನಿಂತಿರುವನು. ದಿಗ್ಗಜಗಳು ಕೆಸರಿನಲ್ಲಿ ನೆಲೆನಿಂತ ಕೂರ್ಮನ ಬೆನ್ನ ಮೇಲೆ ನಿಂತಿರುವುವು. ಭಗವಾನ್ ಸೂರ್ಯನಾರಾಯಣನು, ಅರುಣಸಾರಥಿಯಾಗಿ ಸಾಗಿ ತನ್ನ ರಥದ

ಸಪ್ತ ತುರಗಗಳಿಗೆ ವಿಶ್ರಾಂತಿಯನ್ನು ಕೊಡಲು ಕಳಗ ಬಿಚ್ಚಿದನೆಂದರೆ ರಾತ್ರಿಯಾಗುವುದು. ಹೀಗೆ ಭಗವದನುಗ್ರಹದಿಂದಲೆ ದಿವಸ ರಾತ್ರಿ ವರ್ಷಗಳಾಗುವುವು.

ರಾಯರು ನನಗೆ ಉತ್ತರವನ್ನೇ ಕೊಡದೆ, ಹಣಮನಿಗೆ, 'ನಿಮ್ಮೂರಿಗೆ ಶೂರ್ಪಾಲಿ ಎಂದು ಹೇಗೆ ಹೆಸರು ಬಿದ್ದಿತು?' ಎಂದು ಕೇಳಿದರು.

ಹಣಮ—ಶೂರ್ಪಾಲಿಗೆ 'ಮರನೂರು' ಎಂದು ಕರೆಯುತ್ತಾರೆ. ನರಸಿಂಹನಿಗೆ, 'ಆರಳೆಯ ಮರದಪ್ಪ,' ಎಂದು ಸಂಬೋಧಿಸುವುದುಂಟು. ಅನಾದಿಯಿಂದ ಆ ಊರ ಆರಳೆಯ ಮರವು ಪ್ರಸಿದ್ಧ. ಆದರಿಂದ ಮರ ನೂರೆಂದು ಊರಿಗೆ ಹೆಸರು ಬಿದ್ದಿದೆ. ನಮ್ಮಲ್ಲಿ ಕೇರುವ ಮೊರಕ್ಕೂ 'ಮರ' ಎಂದು ತಪ್ಪಾಗಿ ಉಚ್ಚರಿಸುವುದುಂಟು. ಸಂಸ್ಕೃತ ಪಂಡಿತರು, ಮೊರ ಮರಗಳ ಭೇದವನ್ನರಿಯದೆ, 'ಮರನ ಊರಿಗೆ' (ಶೂರ್ಪ+ಆಲಿ) ಎಂದರೆ ಮೊರದಾಕಾರದ ಪಂಕ್ತಿಯುಳ್ಳದು ಎಂದು ಭಾಷಾಂತರಿಸಿದರು. ಹೀಗೆಂದು ಶಾಲೆಯೊಳಗೆ ಅಯ್ಯನವರು ಹೇಳಿದರು.

ನಾನು—ರಾಯರೆ ನೋಡಿರಿ, ಬ್ರಾಹ್ಮಣರಲ್ಲದ ಶಿಕ್ಷಕರು ಹೀಗೆಯೆ ಹುಡುಗರ ಮನಸ್ಸು ಕೆಡಿಸಹತ್ತಿದ್ದಾರೆ. ಸಂಸ್ಕೃತ ಪಂಡಿತರಿಗೆ ಮರ ಮೊರಗಳ ಭೇದ ಗೊತ್ತಿರುವುದಿಲ್ಲವೆ? ವೇದಕಾಲದಿಂದ ನೆಲಿಸಿದ ನರಸಿಂಹನ ಕ್ಷೇತ್ರಕ್ಕೆ ಕನ್ನಡ ಹೆಸರು ಎಲ್ಲಿಂದ ಬಂದಿತು? ದೇವತೆಗಳಾಡುವ ಗೀರ್ವಾಣ ಭಾಷೆ ಮೊದಲೊ ಪ್ರಾಕೃತರ ಕನ್ನಡ ಮೊದಲೊ ರಾಯರೇ, ನೀವೇ ಹೇಳಿರಿ? ಶೂರ್ಪಾಲಿಯೆಂಬುದನ್ನು ಪ್ರಾಕೃತರು ತಪ್ಪಾಗಿ ಕನ್ನಡಿಸಿ, ಮರನೂರೆಂದು ಅನ್ನುತ್ತಿರುವರು!

ಅಷ್ಟರಲ್ಲಿ ರಾಯರ ಮಗಳು ಎಲ್ಲರನ್ನೂ ಊಟಕ್ಕೆ ಎಬ್ಬಿಸಿದಳು. ರಾಯರು, 'ಹಣಮನು ಬುದ್ಧಿವಂತನಿದ್ದಾನೆ. ಇಂಗ್ಲಿಷ ಶಾಲೆಗೆ ಹಾಕಿರಿ. ನನ್ನ ಕೈಲಾದಷ್ಟು ನಿಮಗೆ ಸಹಾಯ ಮಾಡುವೆನು.' ಎಂದರು. ರಾತ್ರಿ ಊಟವಾದ ಬಳಿಕ ಮಾತಾಡುತ್ತ ಕುಳಿತಾಗ ನಾನು

ಮನೆ ಹಿಡಿದುದನ್ನೂ ಅಲ್ಲಿಗೆ ಮರುದಿವಸ ಹೋಗುವುದನ್ನೂ ತಿಳಿಸಿದೆನು. ರಾಯರು ಒಂದೆರಡು ದಿವಸ ನಿಲ್ಲಲಿಕ್ಕೆ ಆಗ್ರಹ ಮಾಡಿದರೂ ಮರುದಿವಸ ಮುಹೂರ್ತ ಚೆನ್ನಾಗಿದ್ದುದರಿಂದ ಅಲ್ಲಿಗೆ ಹೋಗುವುದನ್ನು ಮುಂದೆ ಹಾಕಲಿಲ್ಲ.

# ವಿರಾಟಪರ್ವ

## ೧ ಅಜ್ಞಾತವಾಸ

ನಮ್ಮ ಹೊಸ ಬೀಡಾರ, ಹಾಲಗೆರೆಯ ಹತ್ತರ. ಒಂದೇ ಮನೆಯಲ್ಲಿ ನೆಲಸಿರುವ ನಾಲ್ಕು ಒಕ್ಕಲುಗಳಲ್ಲಿ ನಮ್ಮದು ಒಂದು. ಎಲ್ಲರಿಗೂ ಕೂಡಿ ಒಂದೇ ಹಿತ್ತಲ, ಒಂದೇ ತೋಟ, ಒಂದೇ ಡೋಣಿ, ಒಂದೇ ಶೌಚಕೂಪ. ನಮ್ಮ ಬೀಡಾರದಲ್ಲಿ ಮೂರೇ ವಿಭಾಗಗಳು. ಒಂದರಲ್ಲಿ ಅಡುಗೆಮನೆ, ಬಚ್ಚಲ, ದೇವರ ಮನೆ. ಅದರಷ್ಟೇ ಇರುವ ಮತ್ತೊಂದರಲ್ಲಿ ನಮ್ಮೆಲ್ಲರಿಗೆ ಹಗಲು ಕೂಡ್ರುವ, ರಾತ್ರಿ ಮಲಗುವ ಸ್ಥಳ. ಅದಕ್ಕೆ ಬೀದಿಗೆ ಮೊಗವಿಟ್ಟ ಬಾಗಿಲು. ದಾರಿಯಿಂದ ಹೋಗುವವರು ಒಳಗೆ ನೋಡಿದರೆ ಎಲ್ಲವೂ ಕಾಣಲಿಕ್ಕೆ ಅನುಕೂಲವಾದುದು. ಈ ಸ್ಥಳದ ಎಡಬದಿಯಲ್ಲಿ ಒಳಗಿನಿಂದಲೆ ಬಾಗಿಲಿರುವ ಒಂದು ಚಿಕ್ಕ ಕೋಣೆ. ಶೂರ್ಪಾಲಿಯಲ್ಲಿ ಪ್ರಶಸ್ತವಾಗಿರುವ ಮನೆಯಲ್ಲಿದ್ದ ನಮಗೆ ನೋಡಲಿಕ್ಕೆ ಆ ಮನೆಯು ತೀರ ಆಕುಂಚಿತವಾಗಿ ತೋರಿತು. ಹೆಂಡತಿಯ ಚಾತುರ್ಯ ಅಚ್ಚುಕಟ್ಟುಗಳಿಂದ ಕಡಿಮೆ ಬಾಡಿಗೆ ಬೀಳುವ ಅದಕ್ಕೂ ಚಿಕ್ಕ ಮನೆ ಹಿಡಿದಿದ್ದರೆ ಒಳಿತಾಗುತ್ತಿತ್ತೆಂದು ಅನಿಸತೊಡಗಿತು. ಬಚ್ಚಲಕ್ಕೂ ಅಡುಗೆಯ ಒಲೆಗೂ ನಡುವೆ ಕಟ್ಟಿಗೆ ಒಟ್ಟಿ ಹೆಂಡತಿಯು ಮರೆಮಾಡಿಕೊಂಡಳು. ಒಲೆಯ ಹತ್ತಿರದಲ್ಲಿಯೆ ದೇವರ ಸ್ಥಳ ರಚಿಸಿ

ನನಗೆ ಕೂತಲ್ಲಿಯೆ ನೈವೇದ್ಯ ವೈಶ್ವದೇವಗಳು ಸಾಧಿಸುವಂತೆ ಅವಳು ವ್ಯವಸ್ಥೆ ಪಡಿಸಿದಳು. ಅಲ್ಲಲ್ಲಿ ಗೋಡೆಯಲ್ಲಿ ಗೂಟ ಮೊಳೆಗಳನ್ನು ಹೊಡೆದು ಮಡಿಯುರಿವೆ ನೆಲುವುಗಳಿಗೆ ಅನುವು ಮಾಡಿಕೊಟ್ಟಳು. ಮಕ್ಕಳು ಅಚ್ಚುಕಟ್ಟಾಗಿ ಊಟಕ್ಕೆ ಕುಳಿತರೆ ಒಬ್ಬರು ಮತ್ತೊಬ್ಬರನ್ನು ಮುಟ್ಟದಂತೆ ಸ್ಥಳ ಉಳಿಸಿದಳು. ಚಿಕ್ಕ ಕೊಠಡಿಯು, ಕೊಟ್ಟಿಗೆಯ ಕೋಣೆ, ಹಗಲು ಹಾಸಿಗೆ ಹೊತ್ತಿಗೆ ಇಡುವ ಸ್ಥಳ, ಬೇಕಾದರೆ ಹಣಮನಿಗೆ ಓದಲು ಕೂಡ್ರುವ ನಿವಾಂತ ಸ್ಥಾನ ಮೊದಲಾದವುಗಳಿಗಾಗಿ ಪರಿಣಮಿಸಿತು. ಉಳಿದ ಒಂದು ಭಾಗದಲ್ಲಿ ಚಾಪೆಯನ್ನು ಹಾಸಿ ನನಗೆ ಕೂಡ್ರಲು ಅನುವು ಮಾಡಲಾಯಿತು. ರಾತ್ರಿ ಎಲ್ಲರಿಗೂ ಮಲಗಿಕೊಳ್ಳಲು ಅನುಕೂಲವಾಯಿತು. ಅವಳು ತಲೆಯ ಮೇಲೆ ಚಪ್ಪರಕ್ಕೆ ಕೋಲುಗಳನ್ನು ಕಟ್ಟಿ ಮಡಿಸೀರೆ ದೋತ್ರಗಳನ್ನು ಒಣಹಾಕಲು ಒಳ್ಳೆಯ ಸ್ಥಳವೆಂದು ಕಲ್ಪಿಸಿದಳು. ಆದರೆ ನಾನು ಮಡಿವಸ್ತ್ರಗಳು ತೀರ ತಲೆಗೆ ಹತ್ತುವಂತೆ ನೇತಾಡುವುದರಿಂದ ಅವುಗಳಿಗೆ ಮೈಲಿಗೆಯಾಗಬಹುದೆಂದು ನುಡಿದರೂ, ಆಕೆಯು, ಧಾರವಾಡದಲ್ಲಿ ಸ್ವಲ್ಪ ತಲೆ ಬೊಗ್ಗಿಸಿ ನಡೆಯಬೇಕಾಗುವುದೆಂದು ಸೂಚನೆ ಕೊಟ್ಟಳು. ಈ ವ್ಯವಸ್ಥೆಯನ್ನು ಕಂಡು, ಮೂಢರು ವ್ಯರ್ಥವಾಗಿ ದೊಡ್ಡ ಮನೆ ಕಟ್ಟಿ ಹಣ ಹಾಳು ಮಾಡುತ್ತಿರುವರೆಂದು ಅನಿಸತೊಡಗಿತು! ಪಡಿಸಾಲೆಯಲ್ಲಿರುವ ಗೂಟಗಳಿಗೆ ಗಂಟುಗದಡಿಗಳಿಲ್ಲದ ಕಾರಣ ಹಿಂದುಗಡೆಗೆ ನಾನು ಪುರಾಣ ಹೇಳುವಾಗ ತಿಳಿಯಿತು.

ನಾರಾಯಣನು ಮಠದ ಆಚಾರ್ಯರ ಪರಿಚಯ ಮಾಡಿಕೊಟ್ಟು ಸಂಚಾರಕ್ಕೆ ಹೊರಟು ಹೋದನು. ಚಾತುರ್ಮಾಸ್ಯದಲ್ಲಿ ಯಾವುದಾದರೊಂದು ಗುಡಿಯಲ್ಲಿ ಪುರಾಣ ಹೇಳಬೇಕೆಂದು ಅಲ್ಲಲ್ಲಿಯ ಅರ್ಚಕರನ್ನು ಕೇಳಿಕೊಂಡೆನು. ಗುಡಿಗಳು ಒಬ್ಬೊಬ್ಬ ಪುರಾಣಿಕರಿಗೆ ಮೀಸಲಾಗಿರುವುವೆಂದು ತಿಳಿಯಿತು. ಆದರೂ ಪುರಾಣ ಪ್ರಾರಂಭಿಸಬೇಕೆಂದು ನನ್ನ ಸಾಹಸ. ಎಂಟು ಹತ್ತು ದಿವಸಗಳಲ್ಲಿ ಹೆಂಡತಿಯು

ನೆರೆಯುವರ ಪರಿಚಯ ಮಾಡಿಕೊಂಡು ಅವರಿಗೆ ನಮ್ಮ ಮನೆಯಲ್ಲಿ ಪುರಾಣವಾಗುವುದೆಂದು ಮೊದಲೇ ತಿಳಿಸಿದಳು.

ವರ್ಷದಲ್ಲಿ ಇಂಗ್ರೇಜಿ ಶಾಲೆಯ ಮೂರು ಇಯತ್ತೆಗಳನ್ನು ಮುಗಿಸುವ ವರ್ಗಕ್ಕೆ ತಿಂಗಳಿಗೆ ಮೂರು ರೂಪಾಯಿ ಗೊತ್ತು ಮಾಡಿ ಹಣಮನನ್ನು ಕಳುಹಿಸತೊಡಗಿದೆನು. ಭೀಮನು ಕನ್ನಡ ಶಾಲೆಗೆ ಹೆಸರು ಹಚ್ಚಿದನು. ಹಣಮ ಭೀಮರ ಸ್ವಭಾವವನ್ನು ಅವಲೋಕಿಸಿದರೆ ಜೀವ ಜೀವಗಳ ಭೇದವು ಮನವರಿಕೆಯಾಗುವುದು. ವೆಂಕಟರಾಯರ ಮನೆಯಲ್ಲಿ ಹಣಮನಿಗೆ ನಿತ್ಯಾವಳಿ ಹತ್ತಿತು. ರಾಯರೂ ಗಂಗಾ ಬಾಯಿಯವರೂ ಹಣಮನಮೇಲೆ ಪುತ್ರನಂತೆ ಪ್ರೇಮಮಾಡುತ್ತಿದ್ದರೂ ಹಣಮನು ಅವರ ಮನೆಯ ಊಟಕ್ಕೆ ಜಕಜಕ ಜರಿಯುವನು. ಊಟವಾದೊಡನೆ ನಾಚಿಕೆಯಿಂದ ಎಲೆಯಡಕೆಯನ್ನು ತೆಗೆದುಕೊಳ್ಳದೆ, ಮರೆತೆನೆಂದು ದಕ್ಷಿಣೆಯನ್ನೇ ಬಿಟ್ಟು ಬರುವನು. ಆದರೂ ಅವನು ಅಭ್ಯಾಸಪ್ರಿಯನು. ವರ್ಗವನ್ನು ಒಂದೂ ದಿನ ತಪ್ಪಿಸುತ್ತಿರಲಿಲ್ಲ. ಶಾಲೆಗೆ ಲೋಪವಾಗುವುದೆಂದು ಭೀಮನು ಔತಣಕ್ಕೆ ಆಶೆಬಡುವನು. ಬಂದ ದಕ್ಷಿಣೆಯ ಅರ್ಧಮರ್ಧ ಭಾಗವನ್ನು ಖರ್ಚು ಮಾಡಿ ಉಳಿದುದನ್ನು ಹೆಂಡತಿಯ ಕೈಯಲ್ಲಿರಿಸುವನು. ತನ್ನ ಕೆಲಸದಲ್ಲಿ ಅವನು ನೆರವಾಗುತ್ತಿರುವುದರಿಂದ ಅವನ ತುಂಟತನವನ್ನು ಹೆಂಡತಿಯು ಬಚ್ಚಿಡುವಳು.

ಪುರಾಣವು ಮನೆಯಲ್ಲಿಯೆ ಪ್ರಾರಂಭವಾಯಿತು. ಕೇಳುವವರಕಿವಿ ತುಂಬಬೇಕೆಂದು ಮೊದಲು ದಶಮಸ್ಕಂಧ ಭಾಗವತವನ್ನು ಹಿಡಿದೆನು. ಎಂಟು ಹತ್ತು ಜನರು ಬರತೊಡಗಿದರು. ಹೆಚ್ಚು ಜನ ಬಂದರೆ ಸ್ಥಳ ಸಂಕೋಚದ ಅಂಜಿಕೆಯು ಬರತೊಡಗಿತು. ಶ್ರೋತೃವೃಂದವು ಅಚ್ಚಳಿಯದೆ ಉಳಿದುದರಿಂದ ನನ್ನ ಸಂಶಯವು ಬಯಲಾಯಿತು. ನಾಲ್ಕೈದು ಜನ ಮುದುಕರು ನಾಲ್ಕೈದು ಜನ ಮುದುಕೆಯರು ನನ್ನ ಸೊತ್ತಾದರೆಂದು ಸಂತಸಗೊಂಡೆನು. ಅವರನ್ನು ಕಳೆದುಕೊಳ್ಳಬಾರದೆಂದು ಪುರಾಣದ ಕೊನೆಗೆ ಮಾಸ ಮಾಹಾತ್ಮ್ಯಗಳನ್ನು ಒಂದರ ಹಿಂದೊಂದು

ಜೋಡಿಸತೊಡಗಿದೆನು. ನನ್ನ ಪುರಾಣದ ಬಗ್ಗೆ ಕೇಳುವವರ ಮತವೇ ನಿರುವುದೆಂಬುದನ್ನು ಅಪ್ರತ್ಯಕ್ಷವಾಗಿ ತಿಳಿದುಕೊಳ್ಳುವ ಅಭಿಲಾಷೆ ಯಿಂದ ಆಗಾಗ್ಗೆ ಪುರಾಣ ಮುಗಿದ ಮೇಲೆ ಮಾತು ಕತೆಯಾಡಲು, 'ಕೇಳಬೇಕು, ಭಾಗವತ ಪುರಾಣ, ಇಂಥವರ ಬಾಯಿಂದ; ಅಂಥವರ ರಾಗ ನೆಲುಗುಗಳು ಯಾರಿಗೂ ಬರುವುದಿಲ್ಲ; ಉಪ್ಪುಕಾರ ಹಚ್ಚಿ ಸವಿ ಯಾಗಿ ಹೇಳಬೇಕಾದರೆ ಇಂತಹರನ್ನು ಕೇಳಬೇಕು,' ಎಂಬ ಉದ್ಗಾರ ಗಳು ಹೊರಡುವುವು. ಪೌರಾಣಿಕರಿಗೆ ವಿಶಿಷ್ಟ ಗುಡಿಗಳು ಮೀಸಲಾಗಿರು ವಂತೆ, ಅವರಿಗೆ ವಿಶಿಷ್ಟ ಶ್ರೋತೃವೃಂದವೂ ವಶವಾಗಿರುವುದೆಂಬುದೂ ಗೊತ್ತಾಯಿತು.

ಗುಡಿಗಳು ದೂರದಲ್ಲಿರುವುದರಿಂದ ಮುದುಕೆಯರು ಸಮೀ ಪದಲ್ಲಿರುವ ನನ್ನ ಮನೆಗೆ ಸೊಸೆಯಂದಿರ ಕಾಟ ತಪ್ಪಿಸಲು ಬರು ವರೆಂದು ಹೆಂಡತಿಯು ತಿಳಿದುಕೊಂಡಳು. ಒಂದು ದಿನ ಇಬ್ಬರು ಮೂವರು ಮುತ್ತೈದೆಯರು ಪುರಾಣಕ್ಕೆ ಬಂದುದನ್ನು ಕಂಡು ಹರ್ಷಪುಲಕಿತನಾದೆನು. ಒಬ್ಬಳು ಕೂಸನ್ನು ತಾಯಿಯ ಹತ್ತಿರ ಇಳಿಸಬೇಕೆಂದೂ ಒಬ್ಬಳು ಮರೆತು ಬಂದ ಅತ್ತೆಯ ಮುಂದೆ ಎಲೆ ಹಚ್ಚಲು ಎಲೆಸಿಗುರುಗಳನ್ನು ಒಗೆಯಬೇಕೆಂದೂ, ಮತ್ತೊಬ್ಬಳು ಅತ್ತೆಯನ್ನು ಆಡುಗೆಗೆಬ್ಬಿಸಬೇಕೆಂದೂ ಬಂದುದು ಗೊತ್ತಾದೊಡನೆ, ನಾನು 'ಅಯ್ದುಗಿತಿಯರಿಗೆ ಪುರಾಣ ಕೇಳಬಾರದೆಂದು ಯಾವ ಪುರಾ ಣದಲ್ಲಿ ಹೇಳಿದೆ?' ಎಂದು ನೆನೆದು ವಿಸ್ಮಯಚಕಿತನಾದೆನು. ಪುರಾ ಣದ ಪುರುಷ ಶ್ರೋತೃಗಳು ಒಬ್ಬೊಬ್ಬರು ಒಬ್ಬೊಬ್ಬರ ವಿಷಯದಲ್ಲಿ ನನ್ನ ಮುಂದೆ ಮಾತಾಡಿದುದನ್ನು ಕೇಳಿ, ಒಬ್ಬನು ಬಡತರ್ಫ ಆದ ಸ್ಟೇಶನ ಮಾಸ್ತರ, ಎರಡನೆಯವನು ಪೆನಶನು ಪಡೆದ ಪ್ರಾಥಮಿಕ ಶಾಲಾಮಾಸ್ತರ, ಮೂರನೆಯವನು ನನ್ನಂತೆ ಮನೆಮಾರುಗಳಿಗೆ ಮಂಗಳಾರತಿ ಮಾಡಿ ಮಕ್ಕಳ ಶಿಕ್ಷಣಕ್ಕಾಗಿ ಬಂದ ಶಾನುಭೋಗ, ನಾಲ್ಕನೆಯವನು ಪುರಾಣದ ಮಂಗಳವನ್ನು ಸ್ವಲ್ಪದರಲ್ಲಿ ತೀರಿಸಿ ತುಂಬ ಫಲ ಪಡೆಯಬೇಕೆಂಬ ಬಯಕೆಯಿಂದ ಬರುವ ಜಿಪುಣ ಸಬ್‌ರಜಿಸ್ಟ್ರರ.

ಎಂದು ಗೊತ್ತಾಯಿತು. ಹೆಂಡತಿಯು ಪುರಾಣಕ್ಕೆ ಬಂದ ಮಕ್ಕಳ ಹೊಲಸು, ಹೂಬತ್ತಿಯನ್ನು ಮಾಡುವಾಗ ನೆಲಕ್ಕೆ ಸುಣ್ಣಾತಿಕ್ಕಿದ ಹೊಲಸು,ಹತ್ತಿಹತ್ತಿಯಕಾಳಿನ ಕಸ, ಎಲೆಸಿಗುರುಗಳ ಕಸ, ಇವುಗಳನ್ನು ತೆಗೆದು ತೆಗೆದು ದಿನವೊಂದಕ್ಕೆ ಗುಣುಗುಟ್ಟುವಳು. ಆದರೂ ತಂಡು ಲದ ತಾತ್ಕಾಲಿಕ ತೊಂದರೆಯು ತೀರುವುದೆಂದು ಪ್ರತಿನಿತ್ಯದ ಪುರಾಣದಲ್ಲಿಯ ನನ್ನ ತತ್ಪರತೆಯು ಕಡಿಮೆಯಾಗಲಿಲ್ಲ.

ಹಬ್ಬಹುಣ್ಣಿವೆಗಳು ಕೈ ಬಿಗಿ ಹಿಡಿದು ಸಾಗಿದುವು. ವೆಚ್ಚ ಹೆಚ್ಚಾಗುತ್ತಿರುವುದೆಂದು ನಾನು ಆಗಾಗ್ಗೆ ರೇಗುವೆನು. ನನ್ನ ಸ್ವಭಾವ ವನ್ನು ಬಲ್ಲ ಹೆಂಡತಿಯು ಸಿಟ್ಟಿನಲ್ಲಿ ನಿರಾಕರಿಸಿದ ವಿಷಯುಗಳನ್ನು ನಾನು ಪ್ರಸನ್ನವದನದಲ್ಲಿರುವಾಗ ಸಾಧಿಸಿಬಿಡುವಳು. ಶೂರ್ಪಾಲಿ ಯಿಂದ ದವ್ಮ್ಯಯ ಆಷಾಢಪೇಟೆಯು ಬಂದಿತು. ಸೀರೆಖಣಗಳು ಚೆನ್ನಾಗಿರುವುದನ್ನು ಕಂಡು, ಹೆಂಡತಿಯು, 'ನಮಗೂ ಶ್ರಾವಣ ಪೇಟೆಯನ್ನು ಕಳುಹ ಬೇಕಾಗುವುದು. ನೂಲಹುಣ್ಣಿವೆಗೆ ಅಳಿಯ ನನ್ನು ಕರೆದು ತಂದು ಬೆಳ್ಳಿಯ ತಾಬಾಣವನ್ನು ಕೊಡುವುದು ವಾಡಿಕೆ,' ಎಂದಳು. 'ಅಳಿಯನು ನೌಕರಿಯಲ್ಲಿ ತೊಡಗಿರುವನು. ಅವನನ್ನು ಕರಿಸಿ ಹಣ ಖರ್ಚು ಮಾಡುವುದಕ್ಕಿಂತ ಇಲ್ಲಿಂದಲೆ ಅವನಿಗೆ ಐದು ರೂಪಾಯಿ ಕಳಿಸಿದರಾಯಿತು,' ಎಂದು ನಾನು ಉತ್ತರವನ್ನಿತ್ತೆನು. ಹೆಂಡತಿಯು, 'ಹಾಗಾಗಲಾರದು ಇಂದಿನ ಚೆಂದ ನಾಳೆಗೆ ಬರುವು ದಿಲ್ಲ. ಆಷಾಢಪೇಟೆಯ ಕಡವನ್ನು ಶ್ರಾವಣಪೇಟೆಯಲ್ಲಿ ತೀರಿಸಲೇ ಬೇಕು,' ಎಂದು ಬಿಗಿಹಿಡಿದು ಅಳಿಯನನ್ನು ಕರಿಸಿದರೂ ನಾನು ರುಮಾಲದಿಂದಲೆ ಕಾರ್ಯವನ್ನು ಮುಗಿಸಿದೆನು. ಶ್ರಾವಣಮಾಸದಲ್ಲಿ ಮಗಳ ಮಂಗಳಗೌರಿ, ಮನೆಯಗೌರಿ ಮೊದಲಾದುವು ತೀರಿದುವು. ನವರಾತ್ರಿಯೂ ಸಾಂಗವಾಯಿತು. ದೀಪಾವಳಿಗೆ ಅಳಿಯನೇ ಏನೋ ನೆವಮಾಡಿ ಬಂದುಬಿಟ್ಟನು. ಹೆಂಡತಿಯ ಉಬ್ಬಟೆಗೆ ನನ್ನ ನಾಲಗೆಯ ಎತ್ತಲಿಲ್ಲ. ಹೀಗಾಗಿ ಹಾ, ಹಾ, ಅನ್ನುವುದರಲ್ಲಿ ಧಾರವಾಡಕ್ಕೆ ಬಂದು ಒಂದು ವರ್ಷವಾಯಿತು. ಹಣವುನು ಮೂರು ಇಯತ್ತೆಗಳನ್ನು

ಮುಗಿಸಿ, ವ್ಹಿಕ್ಟೋರಿಯಾ ಹೈಸ್ಕೂಲಿನಲ್ಲಿ ನಾಲ್ಕನೆಯ ವರ್ಗದಲ್ಲಿ ಹೆಸರು ಹಚ್ಚಿದನು. ವೆಂಕಟರಾಯರ ಪ್ರಯತ್ನದಿಂದ ಅವನಿಗೆ ಮಾಫಿಯಾಯಿತು ಪರೀಕ್ಷೆಗೆ ಕುಳಿತು ಐದು ರೂಪಾಯಿ ಶಿಷ್ಯವೃತ್ತಿಯನ್ನೂ ಹಣವನು ಪಡೆದನು. ಭೀಮನೂ ಕುಂಟುತ್ತ ಕೂರುತ್ತ ಶಿಕ್ಷಣ ಸಾಗಿಸಿದನು.

ಪದ್ಮಿಯನ್ನು ಶಾಲೆಗೆ ಹಾಕಬೇಕೆಂದು ಹೆಂಡತಿಯ ಹಂಬಲ. ಹೆಣ್ಣುಮಕ್ಕಳು ಶಾಲೆಗೆ ಹೋಗತೊಡಗಿದರೆಂದರೆ ಅವರ ಸಂಸಾರ ಸುಖವಾಗಿ ಸಾಗುವುದಿಲ್ಲವೆಂದು ನನ್ನ ಮತ. ಹೆಂಡತಿಯ ಬೇಡಿಕೆಯನ್ನು ನಿರಾಕರಿಸಿದೆನು.

ಹೆಂಡತಿ—ಹೆಣ್ಣುಮಕ್ಕಳು ಕಲಿಯದಿದ್ದರೆ ಅವರಿಗೆ ಯೋಗ್ಯ ವರಗಳೇ ದೊರೆಯುವುದಿಲ್ಲ. ಈಗಿನವರಿಗಂತೂ ಕಲಿತ ಕನ್ಯೆಗಳೇ ಬೇಕು.

ನಾನು—ಏನೇ, ನೀನು ಕಲಿತಿದ್ದೆಯೋ? ನಿನಗೆ ಅಕ್ಷರಜ್ಞಾನವು ಇದೆಯೆ? ನಾನು ನಿನ್ನನ್ನು ಮದುವೆಯಾಗಲಿಲ್ಲವೇ? ನಮ್ಮ ಸಂಸಾರ ಸುಸೂತ್ರವಾಗಿ ಸಾಗುತ್ತಿರುವುದಿಲ್ಲವೇ? ಎಲೈ, ಮೂಢೇ, ಪತಿವ್ರತಾ ಶಿರೋಮಣಿಯಾದ ಸೀತೆಯು ಕಲಿತಿದ್ದಳೇ? ಅವಳನ್ನು ಪ್ರಭುರಾಮಚಂದ್ರದೇವರು ಮದುವೆಯಾಗಲಿಲ್ಲವೆ?

ಹೆಂ—ನಮ್ಮ ಮಾತು ಆಗಿ ಹೋಯಿತು. ಅದಕ್ಕೂ ಹಿಂದಿನ ಮಾತಿನ ಪ್ರಯೋಜನವೇನು? ಪದ್ಮಿಗೆ ಗಂಡನಿಂದ ಪತ್ರಗಳು ಬರುತ್ತವೆ. ಅವನ್ನು ನೀವೇ ಓದಿ ಅವಳಿಗೆ ಹೇಳಬೇಕು. ಆಕೆಗೆ ಓದಲಿಕ್ಕೆ ಬರುತ್ತಿದ್ದರೆ, ತಾನೇ ಓದಿಕೊಳ್ಳುತ್ತಿದ್ದಳು. ನಿಮಗೆ ಓದಲು ಕೇಳುವುದು ಆಕೆಗೆ ನಾಚಿಕೆ. ಏನಾದರೂ ಗಂಡನಿಗೆ ಬರೆಯುವುದಿದ್ದರೆ ಅದನ್ನೆಲ್ಲ ನಿಮ್ಮ ಮುಂದೆ ಬಿಚ್ಚಬೇಕು; ಇಲ್ಲವಾದರೆ ಮನದಲ್ಲಿ ಕಳವಳಗೊಳ್ಳುತ್ತ ಕೂಡ್ರಬೇಕು.

ನಾ—ಏನೇ, ಗಂಡಹೆಂಡರ ರಹಸ್ಯ ಪತ್ರದಲ್ಲೇಕೆ? ಅದಕ್ಕಾಗಿಯೆ ಹೆಂಗಸರು ಶಿಕ್ಷಣದ ದುರುಪಯೋಗಮಾಡುತ್ತಾರೆಂಬ ನನ್ನ ಖಂಡಿತ ಮತ.

ಹೆಂ—ಊರವರೆಲ್ಲರು ಹುಚ್ಚರು, ಓದು ಕಲಿಸುವವರು! ನೆರೆ ಮನೆಯ ಇಂದುಮತಿಯೂ ವರ್ತಮಾನಪತ್ರ ಓದುತ್ತಾಳೆ; ಕತೆ ಕಾದಂಬರಿಗಳನ್ನು ಓದುತ್ತಾಳೆ.

ನಾ—ಎಲೆ, ಮಂದಮತಿಯೇ, ಈ ಕಥೆಕಾದಂಬರಿಗಳಿಂದ ಹೆಣ್ಣುಮಕ್ಕಳ ತಲೆ ಕೆಟ್ಟು ನಮ್ಮ ಬ್ರಾಹ್ಮಣ ಸಮಾಜವೇ ಭ್ರಷ್ಟವಾಗ ತೊಡಗಿದೆ. ಹೆಂಗಸರು ಕಲಿತರೆಂದರೆ ಕೆಟ್ಟು ವರ್ಣಸಂಕರಕ್ಕೆ ಕಾರಣ ರಾಗುತ್ತಾರೆಂದು ಶಾಸ್ತ್ರ ಹೇಳುತ್ತಿದೆ.

ಹೆಂ---ಪುರಾಣ ಪುಣ್ಯಕಥೆಗಳನ್ನು ಓದುತ್ತಾಳೆ. ಬೇಕಾದರೆ ನಮ್ಮಂಥವರಿಗೆ ಅರ್ಥ ಹೇಳುತ್ತಾಳೆ.

ನಾನು—ಕನ್ನಡದಲ್ಲಿ ಎಂತಹ ಪುರಾಣ? ಗೀರ್ವಾಣಭಾಷೆಯಲ್ಲಿ ಋಷಿಪ್ರಣೀತವಾದ ಪುರಾಣಗಳನ್ನು ಪ್ರಾಕೃತರಿಗಾಗಿ ನಮ್ಮಂತ ಹರು ಕನ್ನಡದಲ್ಲಿ ಹೇಳುವುದುಂಟು. ಹೆಣ್ಣುಮಕ್ಕಳಿಗೆ ಪುರಾಣ ಹೇಳುವ ಅಧಿಕಾರವೆಲ್ಲಿಂದ ಬಂದಿತು? ಶ್ರವಣ ಮಾತ್ರವಷ್ಟೇ ಅವರ ಅಧಿಕಾರ!

ನಾನು ಸಿಟ್ಟಿಗೆದ್ದುದರಿಂದ ನಿರುತ್ತರಳಾಗಿ ಹೆಂಡತಿಯು ಹೊರಟು ಹೋದಳು. ಆದರೂ ಪಮ್ಮಿಯನ್ನು ಶಾಲೆಗೆ ಕಳುಹುವುದನ್ನು ಬಿಡ ಲಿಲ್ಲ. ಭೀಮನು ಇಂಗ್ರೇಜಿ ಶಾಲೆಯನ್ನು ಸೇರಿದನು. ಅವನಿಗೂ ಮಾಫಿಯಾಯಿತು. ಹಣಮನ ಪರೀಕ್ಷೆಯಾದೊಡನೆ, ಕೆಲಸ ಹತ್ತಿ, ನಮ್ಮೆಲ್ಲರಿಗೆ ಹೊಟ್ಟೆದುಂಬ ಅನ್ನ ಮೈದುಂಬ ವಸ್ತ್ರಗಳು ದೊರೆಯುವು ವೆಂಬ ಸವಿಗನಸಿನಲ್ಲಿ ಒಂದಿತ್ತು, ಒಂದಿಲ್ಲ, ಹೀಗೆ ಸಂಸಾರ ಸಾಗಿಸಿದೆನು.

## ೨ ವತ್ಸಗ್ರಹಣ.

ಹಣಮನ ಮ್ಯಾಟ್ರಿಕ್ ಪರೀಕ್ಷೆ ಸಮೀಪಿಸಿತು. ಪರೀಕ್ಷೆಗಾಗಿ ಹದಿನೈದು ಇಪ್ಪತ್ತು ರೂಪಾಯಿಗಳು ಹಿಡಿಯುತ್ತವೆಂದು ತಿಳಿಯಿತು. ನನ್ನ ಕೈಯಲ್ಲಿ ಹಣವಿರಲಿಲ್ಲ. ಯಾವ ಉಪಾಯವನ್ನೂ ಕಾಣದೆ ಕೊನೆಗೆ ಮುಷ್ಟಿಯಲ್ಲಿ ಜೀವ ಹಿಡಿದು ವೆಂಕಟರಾಯರ ಕಡೆಗೆ ಸಾಲಕ್ಕೆ ಹೋದೆನು. ಅವರು ಕೂಡಲೆ ಇಪ್ಪತ್ತು ರೂಪಾಯಿ ಕಡ ಕೊಟ್ಟರು.

ಹಣಮನು ಬೆಳಗಾವಿಗೆ ಹೋಗಿ ಪರೀಕ್ಷೆ ಕೊಟ್ಟು ಬಂದನು. ಹೆಂಡತಿಗೆ ಪರೀಕ್ಷೆ ಖಂಡಿತವಾಗಿ ಇಳಿಯುವುದೆಂದು ಮಗನು ಹೇಳಿದುದರಿಂದ ಅವಳು ಪಾಸಾದನೆಂದೇ ತಿಳಿದು ಸಕ್ಕರೆ ತರಲಿಕ್ಕೆ ಹೇಳಿದಳು. ಹಣಮನು ಪರಿಣಾಮ ತಿಳಿಯಲಿಕ್ಕೆ ಇನ್ನೊಂದು ತಿಂಗಳೊಪ್ಪತ್ತು ಬೇಕೆಂದು ಅಂದುದರಿಂದ ಸುಮ್ಮನಾದೆನು. ಹಣಮನ ಪರೀಕ್ಷೆ ಯಿಳಿಯಿತು. ನನ್ನ ಆನಂದಕ್ಕೆ ಮೇರೆದಪ್ಪಿತು. ತಿಂಗಳೊಪ್ಪತ್ತಿನಲ್ಲಿ ಹಣಮನಿಗೆ ಕೆಲಸ ಹತ್ತಿತೆಂದರೆ ಸಾಲ ಉದ್ದರಿಗಳನ್ನು ತೀರಿಸಿ ಸುಖ ದಿಂದಿರುವೆನೆಂದು ಉಬ್ಬಿ ಅದೇ ದಿನ ರಾತ್ರಿ ವೆಂಕಟರಾಯರ ಮನೆಗೆ ಆ ಸುದ್ದಿಯನ್ನು ತಿಳಿಸಲು ಹೋದೆನು. ಅದನ್ನು ಕೇಳಿ ರಾಯರಿಗೂ ಸಂತೋಷವಾಯಿತು. ಅವರು ಹಣಮನ ಗುಣಗಳನ್ನು ಮನದಣಿ ಹೊಗಳಿದರು. ನನಗೆ ಹೆಮ್ಮೆ ಬರತೊಡಗಿತು. ಆಮೇಲೆ ನಾನು, 'ರಾಯರೆ, ಹಣಮನಿಗೆ ತಿಂಗಳೊಪ್ಪತ್ತಿನಲ್ಲಿ ಕೆಲಸ ದೊರೆಯಬಹು ದಲ್ಲವೆ ?

ರಾ—ಆಚಾರ್ಯರೆ, ಈ ಹೊತ್ತು ತಾನೆ ಹಣಮನು ಪಾಸಾಗಿ ದ್ದಾನೆ. ಇಲ್ಲಲ್ಲಿಯ ಕಚೇರಿಗಳಿಗೆ ಅರ್ಜಿ ಹಾಕಿ ಕೇಳಿಕೊಳ್ಳಬೇಕು. ಸ್ಥಳವಿದ್ದರೆ, ಅಧಿಕಾರಿಗಳ ಮನಸ್ಸಿಗೆ ಬಂದರೆ, ಕೆಲಸ ದೊರೆಯಬಹುದು. ನಮ್ಮ ಕಚೇರಿಯಲ್ಲಿ ಇಬ್ಬರನ್ನು ಕಡಿಮೆ ಮಾಡಬೇಕೆಂದು ಬರೆದು ಬಂದಿದೆ. ಎಲ್ಲ ಕಚೇರಿಗಳಲ್ಲಿ ಅದೇ ಹಾಡು.

ಈ ಮಾತು ಕೇಳಿ ನನಗೆ ಬೆಂಕಿಯ ಮೇಲೆ ನೀರು ಸುರುವಿ ದಂತಾಯಿತು.

ನಾನು—ರಾಯರೆ, ಅಂದರೆ ಈ ಪರೀಕ್ಷೆಯಿಂದೇನು ಪ್ರಯೋ ಜನ? ಶಾಲೆಗೆ ಮೊದಲನೆಯ ನಂಬರು ಪಡೆದನೆಂದು ಏಕೆ ಹಣಮ ನನ್ನು ಜನರು ಹೊಗಳುವರು ?

ರಾ—ಪರೀಕ್ಷೆ ಪಾಸಾದರೆ ಮಾತಾಪಿತೃಗಳಿಗೆ ಹೆಮ್ಮೆ ಪಡುವುದೇ ಪ್ರಯೋಜನ. ಶಾಲೆಗೆ ಮೊದಲನೆಯ ನಂಬರು ಪಡೆದನೆಂದರೆ ಶಿಕ್ಷಕರಿಗೆ ತಾವು ಚೆಂದಾಗಿ ಕಲಿಸಿದೆವೆಂದು ಹೊಗಳಿಕೊಳ್ಳುವುದೇ

ಪ್ರಯೋಜನ. ಆದರೂ, ಆಚಾರ್ಯರೆ ನಿಮಗೊಂದು ಸೂಕ್ತ ಸಲಹೆಯನ್ನು ಕೊಡುವೆನು. (ನಾನು ಚಾತಕಪಕ್ಷಿಯಂತೆ ಬಾಯ್ತೆರೆದು ಕುಳಿತೆನು) ಹಣಮನು ಕಾಲೇಜಿಗೆ ಹೋದರೆ ಅವನಿಗೆ ಖಂಡಿತವಾಗಿ ಕನಿಷ್ಟ ಪಕ್ಷಕ್ಕೆ ಹದಿನೈದು ರೂಪಾಯಿ ಶಿಷ್ಯವೃತ್ತಿ ದೊರೆಯಬಹುದು. ಅಲ್ಲಿಯೆ ಅಭ್ಯಾಸ ಮಾಡುತ್ತ ಅವನು ಕೆಲಸ ಹುಡುಕುತ್ತಿರಲಿ. ಕೆಲಸ ದೊರೆತರೆ ಒಳ್ಳೆಯದಾಯಿತು. ಇಲ್ಲವಾದರೆ, ಅಭ್ಯಾಸವಂತೂ ನಡೆದೆಯೇ ನಡೆಯುವುದು. ಆದರೆ ಕಾಲೇಜಿನ ಖರ್ಚು ಮಾತ್ರ ದೊಡ್ಡದು.

ನಾನು—ರಾಯರೆ, ಹಣಮನು ಮನೆಯಲ್ಲಿ ಕುಳಿತರೆ ಶಿಷ್ಯವೃತ್ತಿ ದೊರೆಯುವುದಿಲ್ಲವೆ ?

ರಾ—ಕಾಲೇಜು ಸೇರಿದರೆ ಶಿಷ್ಯವೃತ್ತಿ, ಇಲ್ಲವಾದರೆ ಅದು ದೊರೆಯಲಾರದು. ಹಣಮನನ್ನು ಕಾಲೇಜಿಗೆ ಸೇರಿಸಿ ಬಿಡಿರಿ. ಇನ್ನು ನಾಲ್ಕು ವರ್ಷ ಕಳೆದರೆ ಹಣಮನಿಗೆ ಸರಕಾರದಲ್ಲಿ ನೋಕರಿ ದೊರೆಯಬಹುದು. ಇಲ್ಲವಾದರೆ ಖಾಸಗಿ ಶಾಲೆಗಳಲ್ಲಿ ಅಧ್ಯಾಪಕನ ಕೆಲಸ ಸಿಗುವುದು.

ಹಣಮನು ಅರ್ಜಿಗಳ ಮೇಲೆ ಅರ್ಜಿಗಳನ್ನು ಮಾಡತೊಡಗಿದನು. ಕೆಲಸ ದೊರೆಯಲಿಲ್ಲ. ಕೊನೆಗೆ ಮೃಗಜಲಕ್ಕೆ ಮನಸೋತ ಎರಳೆಯಂತೆ ಹಣಮನ ಕೊನೆಯ ಪರೀಕ್ಷೆಯ ಬೇಟೆಕ್ಕೆ ತುತ್ತಾದೆನು.

ಹಣಮನು ತನ್ನ ಕಾಲೇಜಿನ ಖರ್ಚನ್ನು ತೀರಿಸಿಕೊಂಡರೂ ನನ್ನ ತಾಪತ್ರಯವು ಹೆಚ್ಚಾಗ ತೊಡಗಿತು. ಅರಿವೆ ಕಿರಾಣಿ ಅಂಗಡಿಗಳಲ್ಲಿ, ಅಕ್ಕಿ ಬೆಣ್ಣೆ ಕಟ್ಟಿಗೆ ಹಾಲು ಮೊಸರು ಮಾರುವವರಲ್ಲಿ, ನನ್ನ ಉದ್ದರಿಯು ಬೆಳೆಯುತ್ತ ನಡೆಯಿತು. ಕೆಲವೆಡೆ ಉದ್ದರಿ ಕಟ್ಟಾಯಿತು. ದಿನಾಲು ಒಬ್ಬಿಬ್ಬ ಉದ್ದರಿಯುವರ ಕಾಟ. ಒಂದು ದಿನ ಹಾಲಿನವನು ಧರಣಿ ಕುಳಿತು ಬಾಗಿಲದಲ್ಲಿ ಬಾಯಿ ಮಾಡತೊಡಗಿದನು. ಅದನ್ನು ಕೇಳಿ ನೆರೆಮನೆಯ ಕೊರಡೂರಿನ ಕನಕಪ್ಪನಾಯಕರ ಅಕ್ಕ ಸುಬ್ಬಮ್ಮನು, 'ಆಚಾರ್ಯರೆ ದಿನಾಲು ನಿಮಗೆ ಒಬ್ಬರಿಲ್ಲೊಬ್ಬರು ಕೊಕ್ಕದ

ಸಲುವಾಗಿ ತೊಂದರೆ ಕೊಡುವುದನ್ನು ನೋಡುತ್ತಿದ್ದೇನೆ. ನನ್ನ ತಮ್ಮ ಕನಕನ ಕಡೆಗೆ ಹಣ ಕಡತೆಗೆದುಕೊಂಡು ಅವರ ಸಾಲವನ್ನು ಬಗೆಹರಿಸಿರಿ. ನಿಮಗೆ ಆದಾಗ ಸಾಲ ತೀರಿಸುವಿರಂತೆ' ಎಂದಳು. ಕೂಡಲೆ ಕನಕಪ್ಪನಾಯಕರ ಕಡೆಗೆ ಹೋಗಿ ಇನ್ನೂರು ರೂಪಾಯಿಗಳನ್ನು ಕಾಗದ ಬರೆದು ಕೊಟ್ಟು ತಂದೆನು. ಉದ್ದರಿ ಕೆಲಮಟ್ಟಿಗೆ ತೀರಿಸಿ ಉಳಿದ ರೂಪಾಯಿಗಳನ್ನು ಇಟ್ಟು ಕೊಂಡೆನು. ಕನಕಪ್ಪನಾಯಕರ ಔದಾರ್ಯವನ್ನು ಕೆಲಕಾಲ ಹೊಗಳಿದೆನು. ಆದರೂ ಮನದಲ್ಲಿ ಅವರ ಬಗ್ಗೆ ಸಂಶವು ಹೋಗಲಿಲ್ಲ. 'ನಾಯಕರು ಅಡವು ಇಟ್ಟು ಕೊಳ್ಳದೆ ಹಣ ಕೊಡುವುದಿಲ್ಲವೆಂದು ಖ್ಯಾತಿ. ನನಗೆ ಕಾಗದದ ಮೂಲಕ ಸಾಲವನ್ನು ಏಕೆ ಕೊಟ್ಟಿರಬಹುದು?' ಎಂದು ಹೆಂಡತಿಗೆ ಕೇಳಿದೆನು. ಅವಳು, 'ಯಾವುದಾದರೊಂದು ಕೆಲಸವು ಸುಸೂತ್ರವಾಗಿ ಕೈಗೂಡಿತೆಂದರೆ ನಿಮಗೆ ಸಂಶಯ ಬರುತ್ತದೆ' ಎಂದಳು. ಹಣಮನು ಕಾಲೇಜಿನಲ್ಲಿ ಎರಡು ಪರೀಕ್ಷೆ ಕೊಟ್ಟರೂ ಕೆಲಸ ಹತ್ತಲಿಲ್ಲ. ಇನ್ನೆರಡು ವರ್ಷಗಳು ಎಂದು ಗತಿಸುವುವೆಂದು ದಿನ ಎಣಿಸುತ್ತ ಕುಳಿತೆನು.

ಊರಲ್ಲಿ ಅಸಹಕಾರದ ಚಳವಳಿಯು ಪ್ರಾರಂಭವಾಯಿತು. ಕೆಲ ವಕೀಲರು ಒಂದು ವರ್ಷ ತಮ್ಮ ವ್ಯವಸಾಯವನ್ನು ನಿಲ್ಲಿಸುವೆವೆಂದು ಸಾರಿದರು. ದಿನವೊಂದಕ್ಕೆ ಸಭೆಗಳಾಗಿ ವಿದ್ಯಾರ್ಥಿಗಳು ಶಾಲೆಗಳನ್ನು ಬಿಡಬೇಕೆಂದು ಬೋಧನೆಯಾಗಲಾರಂಭಿಸಿತು. ಭೀಮನ ಉತ್ಸಾಹವು ಬಳೆಯುತ್ತ ನಡೆಯಿತು. ಅವನು, 'ಅಪ್ಪಾ, ನಿನ್ನೆ ವ್ಹಿಕ್ಟೋರಿಯಾ ಹೈಸ್ಕೂಲಿನವರು ಶಾಲೆಗೆ ಮುಜುರೆ ಹೊಡೆದರು. ನಾಳೆ ಕರ್ನಾಟಕ ಕಾಲೇಜಿನವರು ಅಸಹಕಾರ ಮಾಡುವವರಿದ್ದಾರೆ,' ಎಂಬ ಸುದ್ದಿಯನ್ನು ಹೇಳ ತೊಡಗಿದನು. ಮಕ್ಕಳು ಶಾಲೆಯನ್ನು ಬಿಡುವುದು ನನ್ನ ಮನಸ್ಸಿಗೆ ಬರಲಿಲ್ಲ. ಆದುದರಿಂದ ಅಸಹಕಾರದ ಪುರಸ್ಕರ್ತರನ್ನು ಮನದಣಿ ನಿರ್ಭತ್ಸಿಸಿದೆನು. ಒಂದು ದಿನ ಭೀಮನು ಮನೆಯಲ್ಲಿರುವುದನ್ನು ಕಂಡು,

ನಾನು— ಭೀಮಾ ಶಾಲೆಗೆ ಯಾಕೆ ಹೋಗಿರುವುದಿಲ್ಲ ?

ಭೀಮ— ಸರಕಾರದ ಸಂಗಡ ಅಸಹಕಾರ ಮಾಡಿದ್ದೇನೆ. ಇನ್ನು ಶಾಲೆಯ ಕಟ್ಟೆಯನ್ನೇರುವುದಿಲ್ಲ. ಈ ಶಿಕ್ಷಣದಿಂದ ಮನುಷ್ಯನ ಅವನತಿಯಾಗ ತೊಡಗಿದೆ. ಮನುಷ್ಯನು ಪರಾವಲಂಬಿಯಾಗ ಹತ್ತಿರುವನು. ರಾಷ್ಟ್ರೀಯ ಶಾಲೆಯು ಹೊರಟ ಬಳಿಕ ಅಲ್ಲಿ ಶಿಕ್ಷಣ ಪಡೆದು, ಯಾವುದಾದರೊಂದು ಉದ್ಯೋಗವನ್ನವಲಂಬಿಸಿ ಹೊಟ್ಟೆ ತುಂಬಿಕೊಳ್ಳುವೆನು. ವಿದೇಶಿ ಅರಿವೆಗಳನ್ನು ಸುಟ್ಟು, ರಾಟೆಯಿಂದ ನೂಲು ನೂತು ಮನೆಯವರಿಗೆಲ್ಲ ವಸ್ತ್ರ ನಿರ್ಮಿಸುವೆನು.

ನಾನು— ರಾಷ್ಟ್ರೀಯ ಶಾಲೆಯಲ್ಲಿ ಕಲಿಸುವವರು ಈ ವಿದ್ಯೆಯನ್ನೆ ಕಲಿತವರಲ್ಲವೆ ? ಅದೇನೇ ಇರಲಿ, ಅಲ್ಲಿ ಕಲಿತರೆ ಕೆಲಸ ದೊರೆಯುವುದೋ ?

ಭೀ— ಕೆಲಸವನ್ನಾರು ಕೊಡುವವರು ? ಸ್ವರಾಜ್ಯಕ್ಕಾಗಿ ಸ್ವಾರ್ಥತ್ಯಾಗ ಮಾಡಬೇಕಾಗಿದೆ. ಒಂದು ವರ್ಷದಲ್ಲಿ ಸ್ವರಾಜ್ಯ ದೊರೆತ ಮೇಲೆ ಹೊಟ್ಟೆಯ ವಿಚಾರ.

ನಾ— ಭೀಮಾ, ಪುಣ್ಯಕ್ಕೆ ಮನೆಯೊಳಗೆ ಇದ್ದ ಬಿದ್ದ ವಸ್ತ್ರಗಳನ್ನು ಸುಟ್ಟು ನಮಗೆ ದಶದಿಕ್ಕುಗಳ ಅಂಬರವನ್ನುಡಿಸಬೇಡಪ್ಪಾ ! ನೀನು ವಸ್ತ್ರ ತಂದ ಮೇಲೆ ಈ ಚಿಂದಿಕೋರಿಗಳಿಗೆ ನಾನೇ ಅಗ್ನಿಸಂಸ್ಕಾರ ಮಾಡುವೆನು. ಹುಚ್ಚಾ, ಉನ್ನ ವಸ್ತ್ರವಿದ್ದವರ ಮಾತಿಗೆ ಬಲಿ ಬೀಳಬೇಡ. ನಮ್ಮ ತಾಪತ್ರಯಗಳನ್ನು ನೋಡುತ್ತಿರುವೆಯಲ್ಲ. ಉಪ್ಪಿದ್ದರೆ ಎಣ್ಣೆಯಿಲ್ಲ; ಎಣ್ಣೆಯಿದ್ದರೆ ಕಾರವಿಲ್ಲ. ಮನೆಗೆದ್ದು ಮಾರು ಗೆದೆಯಬೇಕು.

ಭೀ— ಮತ್ತೂ ಒಂದು ಕೆಲಸವಿದೆ. ಉಚ್ಚತರಗತಿಯವರಾದ ನಾವು ಕೆಳಗಿನವರಿಗೆ ಅಸ್ಪೃಶ್ಯರೆಂದು ತಿಳಿದು ಅವರನ್ನು ನಮ್ಮ ಸಮಾಜದ್ದಿಂದ ಬಹಿಷ್ಕರಿಸಿರುವೆವು. ಅವರ ಅಸ್ಪೃಶ್ಯತೆಯ ನಿವಾರಣೆಯಾಗಬೇಕಾಗಿದೆ.

ನಾನು— ಭೀಮಾ ನಿನ್ನ ಮಾತಿನ ಅಭಿಪ್ರಾಯ ತಿಳಿಯಲಿಲ್ಲ.

ಭೀ—ಹೊಲೆಯರಿವ್ವಾರೆಯಲ್ಲ? ಅವರನ್ನು ಬ್ರಾಹ್ಮಣ ಮೊದಲಾದವರು ಮುಟ್ಟಿಸಿಕೊಳ್ಳುವುದಿಲ್ಲ. ಅವರ ಸಂಗಡ ನಾವು ಬೆರೆತರೆ ಸ್ವರಾಜ್ಯವು ಶೀಘ್ರವಾಗಿ ದೊರೆಯುವುದು.

ನಾ—ಮೂರ್ಖ, ಪಂಚಮರೊಂದಿಗೆ ಬೆರೆತು ಧರ್ಮವನ್ನು ಮಣ್ಣಿಗೆ ಕೂಡಿಸಬೇಕೆಂದಿರುವೆಯಾ? ಅವರನ್ನು ಹತ್ತಿರ ಕರೆದುಕೊಳ್ಳಬೇಕೆಂದೆಂದು ಹೊಲೆಗೇರಿಯನ್ನು ಸೇರಬೇಕೆನ್ನುವಿಯಲ್ಲವೇ? ಛೀ, ಮೂಢಾ, ಹಾಗಿದ್ದರೆ ನಮ್ಮ ಮನೆಯಲ್ಲಿಯೆ ನೀನಿರಕೂಡದು.

ಭೀ—ಭೀಮನ ಪ್ರತಿಜ್ಞೆಯೆಂದರೆ ಭೀಷ್ಮಪ್ರತಿಜ್ಞೆ.

ಎಂದು ನುಡಿದು ಭೀಮನು ಮನೆಬಿಟ್ಟು ಹೊರಗೆ ಹೋದನು. ಹಣಮನು ಹೋಗಿ ಭೀಮನು ರಾಷ್ಟ್ರೀಯ ಕಚೇರಿಯಲ್ಲಿದ್ದುದನ್ನು ನಮಗೆ ತಿಳಿಸಿದ ಕೂಡಲೆ ನಾನು ಕೆಲ ದಿವಸ ಅವನ ವಿಚಾರವನ್ನೇ ತೆಗೆಯಲಿಲ್ಲ.

## ೩ ಕನಕಪಾಶವಿಚ್ಛೇದನ

ಸುಬ್ಬಮ್ಮನ ಸಲುಗೆಯು ದಿನವೊಂದಕ್ಕೆ ಹೆಚ್ಚಾಗಿ ಬಳೆಯಿತು. ಅವಳು ಒಂದು ದಿನ, ಮಾತಾಡುತ್ತ ಮಾತಾಡುತ್ತ,

'ಆಚಾರ್ಯರೆ ಪಮ್ಮಿಯು ದೊಡ್ಡವಳಾಗಿದ್ದಾಳೆ. ಅವಳಿಗೆ ವರವನ್ನು ನೋಡಿರುವಿರಾ' ಎಂದು ಕೇಳಿದಳು.

ನಾನು—ಅಹುದು. ಅವಳ ಮದುವೆಯ ವಿಚಾರವೇ ಮನಸ್ಸಿನಲ್ಲಿ ಕಟೆಯುತ್ತಲಿದೆ. ಆದರೆ ಮಾಡುವುದೇನು? ಮದುವೆ ಹೂಡಿದರೆ ಹಣ ಬೇಕಲ್ಲವೇ? ಒಂದು ವರ್ಷದೊಳಗೆ ಹಣಮನಿಗೆ ಕೆಲಸವಾಗುವುದು. ಆ ಮೇಲೆ ಪಮ್ಮಿಯ ಲಗ್ನದ ವಿಚಾರ.

ಸು—ಮದುವೆಯಾಗದಿದ್ದ ಮೈನೆರೆದ ಮಗಳ ಪ್ರತಿಯೊಂದು ಮುಟ್ಟಿಗೆ, ತಾಯಿತಂದೆಗಳಿಗೆ ಶಿಶುಹತ್ಯೆಯ ಪಾಪ ತಟ್ಟುವುದೆಂದು ನೀವೇ ಪುರಾಣದಲ್ಲಿ ಹೇಳಿರುವಿರಿ. ಆದುದರಿಂದ ಏನಾದರೂ ಮಾಡಿ ಆ ಪಾಪದಿಂದ ಮುಕ್ತರಾಗಬೇಕಲ್ಲವೆ?

ನಾನು—ಸುಬ್ಬಮ್ಮನವರೇ, ಮೊದಲು ಧರ್ಮಕ್ಕೆ ನಾಲ್ಕು ಪಾದಗಳಿದ್ದುವು. ಈಗ ಮೂರು ಕಾಲುಗಳನ್ನು ಕಳೆದುಕೊಂಡು ಧರ್ಮವು ಕಗ್ಗತ್ತಲೆಯ ಗುಹೆಯಲ್ಲಿ ಬಿದ್ದುಕೊಂಡಿದೆ. ಆದುದರಿಂದ ನಮ್ಮಂತಹ ಮಹಾಜನರ ಮಾರ್ಗವನ್ನು ತಮ್ಮಂತಹರು ಅನುಸರಿಸತಕ್ಕದ್ದು. ಪುರಾಣಗಳಲ್ಲಿ ಅನೇಕ ವಿಷಯಗಳನ್ನು ಹೇಳಿದೆ. ಅವೆಲ್ಲವನ್ನೂ ಸಾಧಿಸುವುದು ಕಲಿಯುಗದಲ್ಲಿ ಸಾಧ್ಯವಿಲ್ಲ. ವರಗಳು ತುಂಬಿ ಕೊಂಡಿವೆ. ಅವು ಆಕೆಯ ಮನಸ್ಸಿಗೆ ಬರುವಂತಿಲ್ಲ. ಪಮ್ಮಿಯು ಸೊಗಸುಗಾರೆ. ಅಂತಿಂತಹ ವರ ಹೇಳಿದರೆ ದಿಟ್ಟತನದಿಂದ ಮೂಗು ಮುರಿಯುವಳು. ಆಕೆಯ ವಿರುದ್ಧವಾಗಿ ವರ ಗೊತ್ತುಪಡಿಸಿ ಅವಳನ್ನು ಮನೆಯಿಂದ ದೂಡುವುದು ನನ್ನ ಮನಸ್ಸಿಗೂ ಬರುವುದಿಲ್ಲ. ಮದುವೆ ಮಾಡುವವರು ನಾವೆಷ್ಟರವರು? ಸ್ವಾಮಿ ನರಸಿಂಹನಿಗೆ ಅದು ಗೊತ್ತು!

ಸು—ವರ ಸಿದ್ಧವಿದೆ. ನಿಮ್ಮ ಇಷ್ಟವಿದ್ದರೆ ಎರಡೇ ದಿವಸಗಳಲ್ಲಿ ಅಕ್ಕಿಯ ಕಾಳು ಬಿದ್ದು ಹೋಗುವುವು. ಸಿರಿವಂತರ ಸಂಗತಿ! ಮಗಳ ಮೈತುಂಬ ವಸ್ತಗಳು! ಮೇಲಾಗಿ ಬಡವರಾದ ನಿಮಗೂ ಸಿರಿವಂತರ ಆಶ್ರಯ!

ಮೈತೊಳೆಯುತ್ತಿದ್ದ ಹೆಂಡತಿಯು ಮಡಿಸೀರೆಯನ್ನು ಅರ್ಧ ಮರ್ಧ ಉಡುತ್ತ ಲಗುಬಗೆಯಿಂದ ಬಂದು, 'ಸುಬ್ಬಮ್ಮಾ ಅಂತಹ ವರನಾರು? ಮೈದುಂಬ ವಸ್ತವೊಡವೆ ಹಾಕುವಂಥವ?' ಎಂದು ಕೇಳಿದಳು.

ಸು—ಆಚಾರ್ಯರೆ, ನಿಮ್ಮ ಗೋತ್ರವಾವುದು?

ನಾ—ಅತ್ರಿಗೋತ್ರ.

ಸು—ಕಾಶ್ಯಪ ಗೋತ್ರಕ್ಕೂ ಆತ್ರಿ ಗೋತ್ರಕ್ಕೂ ಕೂಡುತ್ತದಲ್ಲ?

ನಾನು—ಕೂಡುತ್ತದೆ. ಲಗ್ನವಾಗಬಹುದು.

ಸು—ಅಂದರೆ ಇಂದೇ ಸಂಜೆಗೆ ನಿಶ್ಚಯವಾಗಲಿ.

ನಾ—ಏನು ಸುಬ್ಬಮ್ಮಾ, ಹಾಲು ಬಟ್ಟಲಗಳಿಲ್ಲದೆ ಗುಟುಕ್ ಎಂದೆನ್ನುತ್ತಿರುವಿರಿ. ವರನಾರು? ಅವನನ್ನು ನೋಡಿಕೊಂಡು, ಆಮೇಲೆ ಗೊತ್ತು ಪಡಿಸುವ ಮಾತಲ್ಲವೆ?

ಸು—ವರನನ್ನು ನೀವು ನೋಡಿರುವಿರಿ; ಕನ್ನೆಯನ್ನು ವರಪಕ್ಷದವರು ನೋಡಿ ಒಪ್ಪಿಗೆಯಿತ್ತಿದ್ದಾರೆ. ನಿಮ್ಮ ಸಾಲದ ವಿವಂಚನೆಯೂ ಬಗೆಹರಿಯುವುದು. ಮದುವೆಯ ವೆಚ್ಚವೂ ನಿಮ್ಮ ಮೇಲೆ ಬೀಳುವ ಹಾಗಿಲ್ಲ.

ನಾ—ಸುಬ್ಬಮ್ಮನವರೇ, ನಿಮ್ಮ ಮಾತಿನ ಅಭಿಪ್ರಾಯ ತಿಳಿಯಿತು. ನೀವನ್ನುವ ವರ ಕನಕಪ್ಪನಾಯಕರ ಮಗನಲ್ಲವೆ? ನಾನು ಸಂಕಟದಲ್ಲಿರುವೆನೆಂದು ಋಣವಿಮೋಚನೆ ಬಂಗಾರಗಳ ಬೇಟೆ ತೋರಿಸಿ ಬಂಗಾರದಂತಹ ನನ್ನ ಹೊಟ್ಟೆಯ ಕರುಳನ್ನು ಹೊತ್ತುಕೊಂಡು ಆ ಕುದುರೆಯ ಮೂತಿಯ ಹೇಟಿಗಾಲಿನ ಹಯವದನನಿಗೆ ಕೊಡಬೇಕೆಂದು ಹೊಂಚು ಹಾಕಿರುವಿರಾ? ಎಲೆ, ಮೂಢೇ, ಸುಬ್ಬಮ್ಮನ ಸಂಗಡ ಸಲುಗೆ ಬಳೆಯಿಸಿ ಬಂಗಾರದ ಆಶೆಗಾಗಿ ಮಗಳ ಕೊರಳು ಕೊಯ್ಯಬಯಸುತ್ತಿರುವೆಯಾ? ಪ್ರತಿನಿತ್ಯ ಸುಬ್ಬಮ್ಮನ ಸಂಗಡ ಗುಜುಗುಜು ಮಾತಾಡುವುದರ ರಹಸ್ಯ ತಿಳಿಯಿತು. ಸುಬ್ಬಮ್ಮನವರೇ: ಈ ವಿಷಯವನ್ನು ನೀವು ಇನ್ನು ಮೇಲೆ ಎತ್ತಬಾರದು. ಎಂತಹ ಸಂಕಟವೊದಗಿದರೂ ಶೂರ್ಪಾಲಿಯ ಅಶ್ವತ್ಥಾಚಾರ್ಯರ ಮಗನಾದ ಈ ನರಸಿಂಹನು ಕನ್ಯಾವಿಕ್ರಯ ಮಾಡಿ ಶುಲ್ಕದಿಂದ ಹೊಟ್ಟೆಹೊರುವವನಲ್ಲವೆಂಬುದನ್ನು ಜ್ಞಾಪಕದಲ್ಲಿಡಿರಿ.

ಸು—ಆಚಾರ್ಯರೇ, ನಿಮ್ಮ ಹಿತದ ಮಾತನ್ನೇ ಆಡಿದೆ. ನಿಮ್ಮ ಮನಸ್ಸಿಲ್ಲದಿದ್ದರೆ ಇಲ್ಲವೆಂದರಾಯಿತು. ಇಷ್ಟೇಕೆ ಸಿಟ್ಟು. ಹಯವದನನಿಗೆ ಕನ್ಯೆಗಳೇನು ಕಡಿಮೆ? ನಿಮ್ಮಂತಹ ಸತ್ಪಾತ್ರರ ಹಿತ ಬಗೆಯಬೇಕೆಂಬುದೇ ನನ್ನ ಹಂಬಲ.

ನಾ—ಸುಬ್ಬಮ್ಮಾ ನನ್ನ ಹಿತ ನನಗೆ ತಿಳಿಯುತ್ತದೆ. ನಿಮ್ಮಂತಹರು ಆ ವಿಷಯದಲ್ಲಿ ತೊಂದರೆ ತೆಗೆದುಕೊಳ್ಳುವ ಕಾರಣವಿಲ್ಲ.

ಸುಬ್ಬಮ್ಮನು ಸುಮ್ಮನೆ ಹೊರಟು ಹೋದಳು. ಮರುದಿವಸ ಮುಂಜಾವಿನಲ್ಲಿ ಕನಕಪ್ಪ ನಾಯಕರ ಮನುಷ್ಯನು ಬಂದು ಹೊಸ್ತಿಲದ ಮೇಲೆ ಕುಳಿತು, 'ಧನಿಯರು ನಿಮಗೆ ತಮ್ಮ ಸಾಲವನ್ನು ತೀರಿಸಲು ಹೇಳಿದ್ದಾರೆ. ಇಲ್ಲವಾದರೆ ನಿಮ್ಮ ಮೇಲೆ ಯೋಗ್ಯ ಉಪಾಯವನ್ನು ಕೈಕೊಳ್ಳಲಾಗುವುದು,' ಎಂದು ತಿಳಿಸಲು ನನ್ನನ್ನು ಕಳುಹಿದ್ದಾರೆ, ಎಂದನು. ನನ್ನ ಎದೆ ಝುಲ್ಲೆಂದಿತು. ಆ ಮನುಷ್ಯನು 'ಸ್ವಾಮಿ, ನಾಯಕರ ಸಂಗತಿ ಕಠಿಣ. ನೀವು ಸುಖದಿಂದ ಬಾಳಬೇಕಾದರೆ ನಾಲ್ಕೆಂಟು ದಿವಸಗಳಲ್ಲಿ ಅವರ ಸಾಲ ತೀರಿಸುವುದು ಒಳಿತು,' ಎಂದನು. ನನ್ನ ಎದೆಯ ಮೇಲೆ ನಾಯಕರೆ ಕುಳಿತ ಹಾಗೆ ಅನಿಸತೊಡಗಿತು. ಸಾಲ ತೀರಿಸುವ ವಿವಂಚನೆಯಲ್ಲಿ ನನಗೆ ಅನ್ನ ನೀರು ಸವಿಹತ್ತದ ಹಾಗಾಯಿತು. ಆದುದರಿಂದ ಶೂರ್ಪಾಲಿಯ ಹೊಲವನ್ನು ಮಾರಿ ಸಾಲ ಬಗೆಹರಿಸಬೇಕೆಂದು ನಿಶ್ಚಯಿಸಿ ಊರಿಗೆ ಹೊರಟು ಸಾತಪ್ಪನಿಗೆಯೇ ಅದನ್ನು ಮಾರಿ ನಾಯಕರ ಹಣ ಮುಟ್ಟಿಸಲು ಅವರ ಮನೆಗೆ ಹೋಗಿ, ಲೆಕ್ಕ ಮಾಡಲು ವಿನಂತಿ ಮಾಡಿಕೊಂಡೆನು.

ನಾಯಕರು—ಆಚಾರ್ಯರೆ, ಇಷ್ಟೇಕೆ ತ್ವರೆ. ಸಾವಕಾಶವಾಗಿ ಹಣ ಕೊಟ್ಟಿದ್ದರಾಗುತ್ತಿತ್ತು.

ನಾನು—ನಿಮ್ಮ ಸೇವಕನು ಸಾಲವನ್ನು ತೀರಿಸಲೇಬೇಕೆಂದು ಹೊಸ್ತಿಲದ ಮೇಲೆ ಧರಣಿ ಕುಳಿತನು. ಹೇಗಾದರೂ ನಿಮ್ಮ ಸಾಲವನ್ನು ತೀರಿಸಲೇಬೇಕಲ್ಲವೆ? ಋಣದಲ್ಲಿ ಮುಳುಗಿ ಜನ್ಮಾಂತರದಲ್ಲಿಯೂ ಋಣ ವಿಮೋಚನೆಗಾಗಿ ದೇಹ ತಾಳುವುದು ನನಗೆ ಬೇಕಿಲ್ಲ.

ನಾಯ—ಸಾಲ ತೀರಿಸುವ ಬಗೆಗಳೂ ಅನೇಕವಾಗಿವೆ.

ನಾಯಕರಿಗೆ ಮಗನ ಲಗ್ನದ ಹುಚ್ಚು ಇನ್ನೂ ಬಿಟ್ಟಿಲ್ಲವೆಂಬುದನ್ನು ತಿಳಿದು, ಮುಂದಿನ ಮಾತನ್ನೇ ನಿಲ್ಲಿಸಿ ರೂಪಾಯಿಗಳನ್ನು ಅವರ ಮುಂದೆ ಸುರುವಿದೆನು. ಕೊರಡು ಕೊನರುವುದುಂಟೇ? ಕೇಳುವುದೇನು? ಚಿನ್ನವರದರ ಜಾತಿ, ಚೀಲದಲ್ಲಿಯೆ ಮೂತಿ! ನಾಯಕರು

ಒಂದು ಪೈ ಬಡ್ಡಿಯನ್ನೂ ಬಿಡದೆ ನೂರಕ್ಕೆ ತಿಂಗಳಿಗೆ ಒಂದೂ ವರೆ ರೂಪಾಯಿಯಂತೆ ಲೆಕ್ಕ ಹಾಕಿ ಹಣ ತೆಗೆದುಕೊಂಡರು. ನಾನು ಬರೆದು ಕೊಟ್ಟ ಕಾಗದವನ್ನು ಹಾವಿನ ಹೆಡೆಯಿಂದ ಮಣಿ ತೆಗೆದಂತೆ ಅವರಿಂದ ತೆಗೆದುಕೊಂಡು ಮನೆಯ ದಾರಿಯನ್ನು ಹಿಡಿದೆನು. ಸಾಲ ಕೈಗಡ ಉದ್ದರಿಗಳನ್ನು ತೀರಿಸಲು, ಸಂಕಟಸಮಯದಲ್ಲಿ ಕೊನೆಯ ಆಧಾರವೆಂದು ಕಾಯ್ದಿಟ್ಟ ಹೊಲವನ್ನು ಕಳೆದು ಕೊಂಡೆನು! ಶೂರ್ಪಾಲಿಯಲ್ಲಿ ಮನೆಯನ್ನಾರು ಕೇಳುವರು? ಅಲ್ಲಿ ಎಷ್ಟೋ ಮನೆಗಳಿಗೆ ಬೀಗ ಬಿದ್ದಿವೆ. ನನ್ನ ಮನೆಯ ಬಚ್ಚಲ ಬಿದ್ದು ಹೋಗಿದೆ. ಅಡುಗೆಯ ಮನೆಯು ಮುರಿಕುಳಿಯ ಸ್ಥಿತಿಯಲ್ಲಿದೆ. ಕಟ್ಟೆಯ ಕಲ್ಲಗಳು ಕಳವಾಗಿ ಹೋಗಿವೆ. ಮನೆಗೆ ಬೆಲೆ ಬರುವಂತಿಲ್ಲ. ನಾಲ್ವತ್ತು ಐವತ್ತು ರೂಪಾಯಿಗಳಿಗೆ ಅದನ್ನು ಮಾರಿ ಹಾಕಿದರೆ ಈ ಭೂತಲದಲ್ಲಿ ನನಗೂ ನನ್ನ ಮಕ್ಕಳುಮರಿಗಳಿಗೂ ನೆಳಲೇ ಇಲ್ಲದಂತಾಗುವುದು. ಆದುದರಿಂದ ಅದರ ಮಾರಾಟದ ಆಶೆಯನ್ನು ಸಂಪೂರ್ಣವಾಗಿ ಬಿಟ್ಟುಕೊಟ್ಟೆನು. ಎಲ್ಲಿ ನೋಡಿದರೂ ನಿರಾಶೆ. ನಿರಾಶೆಯ ಮೋಡ ಮುಸುಕಿದ ಕಗ್ಗತ್ತಲೆಯ ನನ್ನ ಮನದಾಕಾಶದಲ್ಲಿ ಮಗನ ಗಳಿಕೆಯ ಚಿಕ್ಕೆಯೊಂದೇ ಮಿಣಿ ಮಿಣಿ ಮಿಣುಕುತಿದ್ದಿತು!

## ಉದ್ಯೋಗ ಪರ್ವ

ಕಾರ್ಯಸಿದ್ಧಿಗೆ ಅನೇಕ ಕಾರಣಗಳ ಅವಶ್ಯಕತೆಯಿದೆ. ಅಂತಹ ಎಲ್ಲ ಕಾರಣಗಳಿಗೆ 'ಸಾಮುಗ್ರಿ' ಎಂದು ಅನ್ನುವರು. ಸಾಮುಗ್ರಿಯಾಯಿತೆಂದರೆ ಕಾರ್ಯವು ಸಿದ್ಧವಾಯಿತೆಂದು ತಿಳಿಯಬೇಕು. ಮಾನವನ ದೃಷ್ಟಿಯು ಆಕುಂಚಿತವಾಗಿರುವುದರಿಂದ ಅವನಿಗೆ ಕಾರ್ಯಸಿದ್ಧಿಗೆ ಬೇಕಾಗಿರುವ ಸಾಮುಗ್ರಿಯ ಎಲ್ಲ ಸಾಧನಗಳು ತೋಚುವುದಿಲ್ಲ. ಪುರುಷಕಾರ ಕಾಲ ಇವೆರಡೂ ಅನುಕೂಲವಾಗಿದ್ದರೂ

ಒಮ್ಮೊಮ್ಮೆ ಕಾರ್ಯವು ಸಾಧ್ಯವಾಗುವುದಿಲ್ಲ. ಆದುದರಿಂದ ದೈವವೇ ಮಹತ್ವದ್ದೆಂದು ಹೇಳಬಹುದು. ದೈವವಿಲ್ಲದಿದ್ದರೆ ಯಾವ ಕಾರ್ಯವೂ ಕೈಗೂಡುವಹಾಗಿಲ್ಲ. ಮನುಷ್ಯನು ಸ್ವಾಭಾವಿಕವಾಗಿ ನಿಷ್ಕ್ರಿಯನಾಗಿರಲಾರನು. ಪರಮಾತ್ಮನು ಕೊಟ್ಟ ಶಕ್ತಿಯಿಂದ ಅವನು ಅವಶನಾಗಿ ಕಾರ್ಯವನ್ನು ಮಾಡುತ್ತಲೇ ಇರುವನು. ಮಾನವನು ಹಂಕಾರದ ಮೂಲಕ ಈ ಪರಾಧೀನಕರ್ತೃತ್ವವು ತನ್ನದೇ ಎಂದು ಅಭಿಮಾನ ಪಡುತ್ತಿರುವನು. ದತ್ತಸ್ವಾತಂತ್ರ್ಯದಿಂದ ಮಾನವನಿಗೆ ಅವನ ಗುಣಕರ್ಮಾನುಸಾರವಾಗಿ ಫಲ ದೊರೆಯುತ್ತಿರುವುದು. ಆಗುವುದು ಸಂಭವಿಸಿಯೇ ತೀರುವುದು; ಅಸಂಭವನೀಯವಾದುದು ಜರುಗುವುದೇ ಇಲ್ಲ. ಆದುದರಿಂದ ಮಾನವನು ಆಗುಹೋಗುಗಳ ವಿಷಯದಲ್ಲಿ ನಿಶ್ಚಲನಾಗಿ ನಿಯತಕರ್ಮಗಳನ್ನಾಚರಿಸುತ್ತಿರುವುದು. ಮಾನವನು ತೋರಿಕೆಗೆ ಅರಕ್ಷಿತನೆಂದು ಕಂಡರೂ ದೈವವಿದ್ದರೆ ಸುರಕ್ಷಿತನಾಗಿರುವನು; ದೈವಹತನಾದರೆ ಎಷ್ಟು ಸುರಕ್ಷಿತವಾಗಿದ್ದರೂ ಹಾನಿಯನ್ನು ತಪ್ಪಿಸಿಕೊಳ್ಳುವುದಾಗುವುದಿಲ್ಲ.

## ೧ ಪ್ರಜಾಗರಪರ್ವ

ಹಣಮನು ಕಚೇರಿಗಳಲ್ಲಿಯೂ ಶಾಲೆಗಳಲ್ಲಿಯೂ ಅಧಿಕಾರಿಗಳನ್ನು ಕಂಡು ಅರ್ಜಿಗಳನ್ನು ಹಾಕತೊಡಗಿದನು. ಕಚೇರಿಗಳಲ್ಲಿ 'ಈಗ ಸ್ಥಳಗಳಿಲ್ಲ.' 'ಬ್ರಾಹ್ಮಣರಿಗೆ ಕೆಲಸ ಸಿಕ್ಕುವಹಾಗಿಲ್ಲ.' 'ಬಿ ಎ. ಪರೀಕ್ಷೆಯವರಿಗೆ ಕೆಲಸವಿಲ್ಲ,' ಎಂಬ ಉತ್ತರಗಳು ಬರತೊಡಗಿದುವು. ನಮ್ಮೆಲ್ಲರಿಗೆ ನಿರಾಶೆಯಾಯಿತು. ತಿಂಗಳೆರಡು ತಿಂಗಳು ಗತಿಸಿದ ಮೇಲೆ, ಒಂದು ದಿನ ನಾನು, 'ಹಣಮಾ, ಮ್ಯಾಟ್ರಿಕ್ ಪರೀಕ್ಷೆ ಕೊಟ್ಟವರಿಗೆ ಸ್ಥಳವಿರುವುದೆಂದು ಅನ್ನುತ್ತಿದ್ದೆಯಲ್ಲ? ನೀನು ಬಿ. ಎ. ಪರೀಕ್ಷೆಯಲ್ಲಿ ಪಾಸಾಗಿದ್ದರೂ ಮ್ಯಾಟ್ರಿಕ್ ಪರೀಕ್ಷೆಯನ್ನು ಕೊಟ್ಟಿರುವಂತೆ ತಿಳಿದು ಆ ಕೆಲಸ ಹಿಡಿಯಬಾರದೇ.

ಹ— ಬಿ. ಎ. ಪರೀಕ್ಷೆಯಲ್ಲಿ ಪಾಸಾದವರಿಗೆ ಇಂತಿಷ್ಟು ಸಂಬಳ ಕೊಡಲೇಬೇಕೆಂದು ಸರಕಾರದ ನಿಯಮವಿದೆ. ಸಂಬಳ ಹೆಚ್ಚಾಗುವುದೆಂದು ನಮ್ಮಂಥವರನ್ನು ಕೆಲಸದ ಮೇಲೆ ತೆಗೆದುಕೊಳ್ಳುವುದಿಲ್ಲ.

ನಾ—ಸಂಬಳ ಹೆಚ್ಚಾಗುವುದೆಂದು ಬಿ. ಎ. ಪರೀಕ್ಷೆಯವರಿಗೆ ಸ್ಥಳ ದೊರೆಯುವುದಿಲ್ಲ. ಮ್ಯಾಟ್ರಿಕ್ ಪರೀಕ್ಷೆಯ ಸಂಬಳ ತೆಗೆದು ಕೊಳ್ಳಲಿಕ್ಕೆ ಬಿ. ಎ. ಯವರಿಗೆ ಕಟ್ಟು. ಅಂದ ಬಳಿಕ ಬಿ. ಎ. ಪರೀಕ್ಷೆ ಕೊಟ್ಟ ತಪ್ಪಿಗಾಗಿ ಅವರು ಕೊರಳಿಗೆ ಉರ್ಲು ಹಾಕಿಕೊಳ್ಳಬೇಕಾಯಿತಲ್ಲ. ಹಣವಾ, ವ್ಹಿಕ್ಟೋರಿಯಾ ಶಾಲೆಯೊಳಗಿನ ಶಿಕ್ಷಕರು ನಿನ್ನ ಪರಿಚಯದವರು. ನಿನ್ನನ್ನು ಆಗಾಗ್ಗೆ ಕೊಂಡಾಡುವುದನ್ನು ನಾನೇ ಅವರ ಬಾಯಿಂದ ಕೇಳಿದ್ದೇನೆ. ಅವರನ್ನು ಕಂಡು ಶಾಲೆಯಲ್ಲಿ ಕೆಲಸ ಹಿಡಿಯಬಾರದೆ?

ಹ—ವ್ಹಿಕ್ಟೋರಿಯಾ ಹೈಸ್ಕೂಲು ಎಂದೋ ಮುರಿದು ಹೋಗಿದೆ!

ನಾ—ಸರಕಾರದವರು ಇಷ್ಟು ಹಣ ಖರ್ಚು ಮಾಡಿಸಿ, ಹುಡುಗರಿಗೆ ವ್ಯರ್ಥಶ್ರಮ ಕೊಟ್ಟು, ಅವರ ಪರೀಕ್ಷೆ ತೆಗೆದುಕೊಂಡು, ಅವರನ್ನು ನಡುನೀರಿನಲ್ಲಿ ಕೈಬಿಡುವುದು ಎಂತಹ ಮಾತು!

ಹ—ವಿಶ್ವವಿದ್ಯಾಲಯವು ಹುಡುಗರ ಹೊಟ್ಟೆ ತುಂಬುವ ಭಾರವನ್ನು ಹೊರುವ ಸಂಸ್ಥೆಯಲ್ಲ. ಅದರ ಕೆಲಸ ಕೇವಲ ವಿದ್ಯೆಯ ದಾನ ಮತ್ತು ಪದವಿಯ ದಾನ!

ನಾ—ಹೊಟ್ಟೆ ತುಂಬಿಕೊಳ್ಳಲಿಕ್ಕೆ ಉಪಯೋಗವಿಲ್ಲದ ವಿದ್ಯೆಯಿಂದೇನು ಪ್ರಯೋಜನ?

ಹ—ವಿದ್ಯೆ ಕಲಿತು ಸುಸಂಸ್ಕೃತನಾಗುವುದೇ ಪ್ರಯೋಜನ. ಅಪ್ಪಾ, ಇಷ್ಟೇಕೆ ಗೋಳಾಡುವಿರಿ. ಖಾಸಗಿ ವರ್ಗವನ್ನು ತೆಗೆದು ಹುಡುಗರಿಗೆ ಕಲಿಸಿದರೆ, ಹಣ ದೊರಕುವಂತಿದೆ. ಈಗಾಗಲೆ ಎಂಟು ಹತ್ತು ಹುಡುಗರನ್ನು ಕಲೆಹಾಕಿದ್ದೇನೆ.

ಹಣಮನ ವರ್ಗವು ಪ್ರಾರಂಭವಾಯಿತು. ಅವನು ಸುಮ್ಮನೆ ಕೂಡ್ರದೆ ಕೆಲಸವನ್ನು ಹುಡುಕುತ್ತಲೆ ಇದ್ದನು. ಬೆಳಗಾವಿಯ ಕಮಿಶನರ ಸಾಹೇಬರ ಕರೆ ಬಂದ ಪ್ರಕಾರ ಅವರನ್ನೂ ಸಂದರ್ಶಿಸಿ ಬಂದನು. ಕೆಲಸದ ಸುಳುವಿಲ್ಲ. ಭೀಮನು ತಿರುಗಿ ಬಂದು ಮನೆ ಸೇರಿದನು. ಅವನಿಗೆ ನಾನು, 'ಭೀಮಾ, ಧಡ್ಡಮಗ ಖೊಟ್ಟಿ ದುಡ್ಡು ಮನೆಗೆ ತಿರುಗಿ ಬರುವುದೇ ಖಂಡಿತ!' ಎಂದುದಕ್ಕೆ ಅವನು ಮೋರೆ ಕೆಳಗೆ ಮಾಡಿ ಕೊಂಡು ಕುಳಿತನು. ಅವನಿಗೆ,

ನಾನು—ಅಸಹಕಾರ ಮಾಡಿದ ವಕೀಲರೂ ವಿದ್ಯಾರ್ಥಿಗಳೂ ಏನು ಮಾಡುತ್ತಿರುವರು?

ಭೀ—ವಕೀಲರು ತಮ್ಮ ಕೆಲಸಕ್ಕೆ ಹತ್ತಿದರು. ವಿದ್ಯಾರ್ಥಿಗಳು ಶಾಲೆಕಾಲೇಜು ಸೇರಿದರು. ಕೆಲವರು ಇನ್ನೂ ಅಸಹಕಾರವನ್ನೇ ಕೈಕೊಂಡಿರುವರು. ಅವರ ಸಂಖ್ಯೆ ಕಡಿಮೆ.

ನಾ—ಅವರ ಹೊಟ್ಟೆಯ ಪಾಡೇನು?

ಭೀ—ಧನವಂತರಾದವರಲ್ಲಿ ಹೊಟ್ಟೆಯ ವಿಚಾರವೆಲ್ಲಿಯದು? ಅವರು ಹೆಸರಿನ ಆಶೆಗಾಗಿ ಹೆಣಗುತ್ತಿರುವರು. ಬಡವರು ಧನದ ಆಶೆ ಗಾಗಿ ಅಂತಹರ ಹೆಸರು ಬಳೆಯಿಸಿ ಫಂಡಿನಿಂದ ಉಪಜೀವಿಕೆ ಸಾಗಿ ಸುತ್ತಿರವರು.

ನಾ—ಭೀಮಾ, ಚಳುವಳಿಯೊಳಗಿನ ಎಲ್ಲ ಜನರು ಅಂತಹರೆ ಏನು?

ಭೀ—ಇಲ್ಲ. ಅವರಲ್ಲಿ ಕೆಲ ಮಹಾತ್ಮರಿದ್ದಾರೆ. ಅವರ ಪುಣ್ಯ ದಿಂದಲೆ ಈ ಚಳವಳಿ ನಡೆದಿದೆ. ಆದರೆ ಅಂಥವರ ಸಂಖ್ಯೆ ತೀರ ಕಡಿಮೆ.

ನಾ—ನೀನೂ ದೊಡ್ಡವರ ಮನವೊಲಿಸಿ ಕೆಲಸ ದೊರಕಿಸಬಾರದೆ?

ಭೀ—ದೊಡ್ಡವರೆಂದೆನಿಸಿಕೊಳ್ಳ ಬಯಸುವವರಿಗೆ ಸ್ವಾಭಿಮಾನ ವುಳ್ಳ ಸ್ವತಂತ್ರ ವಿಚಾರದ ಜನರು ಬೇಕಿಲ್ಲ. ಆದುದರಿಂದ ನಾನು ಹೊಲಿಗೆಯ ಕೆಲಸ ಕಲಿತು ಆ ಉದ್ಯೋಗವನ್ನು ಮಾಡಬೇಕೆಂದಿದ್ದೇನೆ. ಈಗಾಗಲೆ ಹೊಲಿಗೆ ಕಲಿಯಲಿಕ್ಕೆ ಹೋಗಹತ್ತಿದ್ದೇನೆ.

ನಾ—ಭೀಮಾ, ಯಾವುದಾದರೊಂದು ಕೆಲಸ ಮಾಡಿ ಹೊಟ್ಟೆಯ ಉದ್ಯೋಗಕ್ಕೆ ಹತ್ತಬೇಕಪ್ಪಾ.

ನಾಲ್ಕಾರು ತಿಂಗಳುಗಳು ಸಂದುವು. ಹಣಮ ಭೀಮರಿಂದ ಹಣ ಬರಲಿಲ್ಲ. ಒಂದು ದಿನ,

ನಾನು—ಹಣಮಾ, ನಿನ್ನ ವರ್ಗವು ಚೆನ್ನಾಗಿ ನಡೆದಿದೆಯೆ?

ಹ—ಏಳೆಂಟು ಹುಡುಗರು ಬರುತ್ತಾರೆ. ಇಬ್ಬರು ಮಾಫೀ; ಇಬ್ಬರು ಉದ್ರಿ ಹೇಳುತ್ತಾರೆ; ನಾಲ್ಕು ಹುಡುಗರು ಎರಡೆರಡು ರೂಪಾಯಿ ಕೊಡುತ್ತಾರೆ. ಸಾರಿಸುವುದು ಉಡುಗುವುದು, ಅಟ್ಟದ ಬಾಡಿಗೆ, ದೀಪದ ವೆಚ್ಚ ಇವು ಹೋಗಿ ತಿಂಗಳಿಗೆ ಎರಡು ರೂಪಾಯಿ ಗಳು ಸಹ ಉಳಿಯುವುದಿಲ್ಲ.

ನಾನು—ಹೆಚ್ಚಿಗೆ ಹುಡುಗರನ್ನೇಕೆ ಕಲೆಹಾಕಬಾರದು? ಈ ಊರಲ್ಲಿ ವಿದ್ಯಾರ್ಥಿಗಳಿಗೇನು ಕಡಿಮೆ?

ಹ—ವಿದ್ಯಾರ್ಥಿಗಳು ಊರ ತುಂಬ ಇದ್ದಾರೆ. ಅಳುಕಿಗಾಗಿ, ಮುಂದೆ ಪರೀಕ್ಷೆ ಪಾಸಾಗುವ ಆಶೆಗಾಗಿ, ಅವರು ತಮ್ಮ ತಮ್ಮ ವರ್ಗದ ಶಿಕ್ಷಕರ ಮನೆಯಲ್ಲಿಯೆ ಕಲಿಯಲಿಕ್ಕೆ ಹೋಗುತ್ತಾರೆ.

ಈ ಮಾತು ಕೇಳಿ ನಾನು ಉಸ್ಸೆಂದು ನಿಟ್ಟುಸಿರು ಬಿಟ್ಟೆನು. ಅದರ ಪರಿಣಾಮವು ಹಣಮನ ಮೇಲೆ ಬಹಳವಾಯಿತೆಂದು ಅವನ ಮೋರೆಯ ಮೇಲಿಂದ ತಿಳಿಯಿತು. ರಾತ್ರಿ ಅವನು ಹಸಿವು ಇಲ್ಲವೆಂದು ಹೇಳಿ ಮಲಗಿ ಬಿಟ್ಟನು. ಮುಂಜಾವಿನಲ್ಲಿ ಒಂದು ತಾಸು ರಾತ್ರಿ ಯಿರುವಾಗಲೆ ಮನೆ ಬಿಟ್ಟು ಹೊರಗೆ ಹೋದನು. ಮಧ್ಯಾಹ್ನ ವಾದರೂ ಊಟಕ್ಕೆ ಅವನು ಬರದೆ ಇದ್ದುದನ್ನು ಕಂಡು ಭೀಮನು ಅವನ ಅಟ್ಟಕ್ಕೆ ಹೋಗಿ ನೋಡಿದನು. ಹಣಮನು ಅಲ್ಲಿರಲಿಲ್ಲ. ಅವನ ಮಿತ್ರರ ಕಡೆಗೆ ಹೋಗಿ ವಿಚಾರಿಸಲು ಅವರು, 'ಶೂರ್ಪಾಲಿಯು ಬಹು ತರವಾಗಿ ಹುಬ್ಬಳ್ಳಿಗೆ ಹೋಗಿರಬಹುದೆ'ಂದು ಹೇಳಿದರಂತೆ.

ರಾತ್ರಿ ನಾಲ್ಕು ತಾಸು ಹೊತ್ತಾಯಿತು. ಎಲ್ಲರ ಊಟ ಕೆಲಸ ಗಳಾದುವು. ಹಣಮನು ಬಂದು ಅಂಗಿಯನ್ನು ತೆಗೆದು ಕುಳಿತನು.

ಹೆಂಡತಿಯು, 'ಹಣಮಾ ಹುಬ್ಬಳ್ಳಿಗೆ ಹೋಗಿದ್ದೆಯಾ, ಹೇಳಿ ಹೋಗ ಬಾರದೆ?' ಎಂದುದಕ್ಕೆ ಅವನು ಗೋಣು ಹಾಕಿ ಏನೂ ಮಾತಾಡಲಿಲ್ಲ. ಹೆಂಡತಿಯು 'ಅಡುಗೆ ಉಳಿದಿದೆ. ಊಟ ಮಾಡಿ ಮಲಗು' ಎಂದುದಕ್ಕೆ ಅವನು 'ನನಗೆ ತಲೆಸೂಲಿ ಎದ್ದಿದೆ, ಊಟವಿಲ್ಲ' ಎಂದರೂ ಆಕೆಯು ಆಗ್ರಹಮಾಡಿ ಊಟಕ್ಕೆ ಹಾಕಿದಳು. ಹಣಮನು ಅರ್ಧ ಊಟಕ್ಕೆಯೆ ಎದ್ದು ವಾಂತಿಮಾಡಿಕೊಂಡು ಬಂದು ಮಲಗಿದನು. ಹೆಂಡತಿಯು ತಲೆಗೆ ಶುಂಠಿ ಹಚ್ಚಿ ಅರಳಹಿಟ್ಟಿನ ಕಷಾಯಿಯನ್ನು ಕೊಟ್ಟು ಹಣಮನನ್ನು ಕೋಣೆಯಲ್ಲಿ ಹಾಸಿಗೆ ಮಾಡಿ ಮಲಗಿಸಿದಳು. ಜ್ವರ ಏರಿಕೆಯಲ್ಲಿಯೆ ಇದ್ದಿತು. ಹೆಂಡತಿಯು, 'ಹಣಮಾ, ಮೈಯಲ್ಲಿ ಹೇಗಿದೆ?' ಎಂದು ಕಣ್ಣೀರು ಸುರಿಸುತ್ತ ನುಡಿದುದಕ್ಕೆ ಅವನು 'ನನಗೇನಾಗಿದೆ; ದಾರಿಯ ಶ್ರಮದಿಂದ ಜ್ವರ ಬಂದಿದೆ. ಮುಂಜಾವಿನೊಳಗಾಗಿ ಇಳಿಯುವುದು,' ಎಂದನು. ಅದಕ್ಕೆ ನಾನು 'ಹಣಮಾ ಹನ್ನೆರಡು ಮೈಲು ನಡೆದು ಹೋಗಿ ಹನ್ನೆರಡು ಮೈಲು ತಿರುಗಿ ನಡೆದುಬಂದೆಯಾ, ನಿನ್ನ ಹತ್ತರ ಹಣವಿರದಿದ್ದರೆ ನನ್ನನ್ನಾದರೂ ಕೇಳಬಾರದಿತ್ತೇ. ನಿನ್ನಲ್ಲಿ ನಮ್ಮ ವಿಷಯಕ್ಕೂ ದಾಕ್ಷಿಣ್ಯವೆ?' ಎಂದುದಕ್ಕೆ ಅವನು, 'ದಾಕ್ಷಿಣ್ಯವೆಂತ ಹದು; ಇಪ್ಪತ್ತು ನಾಲ್ಕು ಮೈಲು ನಡೆಯುವುದು ನಮ್ಮಂಥವರಿಗೆ ಅಸಾಧ್ಯವೆ? ಬಿಸಿಲಿನೊಳಗೆ ಅಲ್ಲಲ್ಲಿ ನೀರು ಕುಡಿದುದರಿಂದ ಜ್ವರ ಬಂದಿದೆ. ನಾಳಿಗೆ ಇಳಿಯುವುದು' ಎಂದು ನುಡಿದು ನರಳುತ್ತ ಮಲಗಿದನು.

ಮಧ್ಯಾಹ್ನವಾಗುತ್ತಲೆ ಜ್ವರ ಏರಿ ಮೈ ಕೆಂಡವಾಯಿತು. ಹೆಂಡತಿಯು ಅರಳಹಿಟ್ಟಿನ ಕಷಾಯಿ ಕೊಟ್ಟು ಅವನ ಮೈಮೇಲೆ ಕೈಯಾಡಿಸುತ್ತ ಕುಳಿತಳು. ಭೀಮನು ಬೇಡಿದಾಗ ಕಾಯ್ದು ನೀರು ಕೊಡುತ್ತ ಹಣಮನ ಕಾಲ ಬದಿಯಲ್ಲಿ ಕುಳಿತನು. ನಾನು ಹೌಹಾರಿ ಹತ್ತಿರ ದಲ್ಲಿಯೆ ಗೋಡೆಗೆ ಆತುಕೊಂಡು ಇದ್ದೆನು. ರಾತ್ರಿಯಾದರೂ ಜ್ವರ ನಿಲ್ಲಲಿಲ್ಲ. ಹಣಮನಿಗೆ ನಿದ್ರೆ ಹತ್ತಲಿಲ್ಲ. ನಾಲ್ಕಾರು ಸಾರೆ ಏನೋ ಕನವರಿಸಿದಂತೆ ತೋರಿತು. ನಾನೂ ಹೆಂಡತಿಯೂ ಬಾರಿಯಿಂದ ಕಣ್ಣು

ಮುಚ್ಚಿಯೆದ್ದೆವು. ಮುಂಜಾವಿನಲ್ಲಿ ಜ್ವರ ಸ್ವಲ್ಪ ಕಡಿಮೆಯಾಗಿ ಕನವರಿಸುವುದು ನಿಂತಿತು. ಭೀಮುನನ್ನು ಹಾಸಿಗೆಯ ಹತ್ತರ ಕುಳ್ಳಿರಿಸಿ ಹೇಗೋ ಊಟದ ಉಪಚಾರ ಮುಗಿಸಿದೆವು. ಮಧ್ಯಾಹ್ನದಲ್ಲಿ ಜ್ವರಕ್ಕೆ ಮತ್ತೆ ಕಳೆಯೇರಿತು.

ಹಣಮುನು ಬಡಬಡಿಸ ತೊಡಗಿದನು. ಹೊರಳಾಡುವುದೂ ಹೆಚ್ಚಾಯಿತು. ಹೆಂಡತಿ ಭೀಮುರು ಅವನನ್ನು ಹಿಡಿದುಕೊಂಡೇ ಕುಳಿತರು. ಸಂಜೆಗೆ ಈ ಸುದ್ದಿಯನ್ನು ಕೇಳಿ ವೆಂಕಟರಾಯರು ಬಂದು, ಹಣಮುನ ಮೈ ಹಿಡಿದು, ' ಜ್ವರ ಕೆಂಡವಾಗಿವೆ. ಮೇಲಾಗಿ ಹಣಮುನು ಬಡಬಡಿಸ ತೊಡಗಿದ್ದಾನೆ. ಡಾಕ್ಟರರನ್ನು ಕರೆದುಕೊಂಡು ಬರುವೆನು, ' ಎನ್ನುವಷ್ಟರಲ್ಲಿ ಭೀಮುನು ಡಾಕ್ಟರರನ್ನು ಕರೆದುಕೊಂಡೇ ಬಂದನು. ಡಾಕ್ಟರರು ಪರೀಕ್ಷಿಸಿ ' ಇದು ವಿಷಮಜ್ವರದ ಪ್ರಕರಣವಿದ್ದಂತೆ ತೋರುತ್ತದೆ. ರೋಗಿಯನ್ನು ಹಾಸಿಗೆಯಿಂದ ಎಬ್ಬಿಸಕೂಡದು. ಹಣೆಯ ಮೇಲೆ ಬರ್ಫ ಇಡುವುದು ಲೇಸು, ಆದರೆ ಧಾರವಾಡದಲ್ಲಿ ಅದು ದೊರೆಯುವುದಿಲ್ಲ. ನೀರಿನ ಪಟ್ಟಿಯನ್ನು ಇಡಿರಿ. ಈಗ ಔಷಧ ಕೊಡುವೆನು. ಅದನ್ನು ನಾಲ್ಕು ನಾಲ್ಕು ತಾಸಿಗೊಮ್ಮೆ ಹಾಕಿರಿ. ಮುಂಜಾವಿನಲ್ಲಿ ಬಂದು ರೋಗಿಯನ್ನು ಪರೀಕ್ಷಿಸಿ ಔಷಧ ಕೊಡುವೆನು ' ಎಂದು ನುಡಿದು ಹೊರಟು ಹೋದರು.

ಭೀಮುನು ನೀರಿನ ಪಟ್ಟಿಯೌಷಧಗಳ ಉಪಚಾರ ನಡಿಸಿದನು. ನಾನು ಎದ್ದು ಕೈಕಾಲು ತೊಳೆದು ರಾಮರಕ್ಷ ಮಂತ್ರವನ್ನು ಜಪಿಸಿ ನರಸಿಂಹನ ಧ್ಯಾನ ಮಾಡುತ್ತ ರಕ್ಷೆಯನ್ನು ಮಗನ ಮೈಗೆ ಹಚ್ಚಿದೆನು. ಹೆಂಡತಿಯು ತನ್ನ ಮೂಗುಬೊಟ್ಟನ್ನು ಅರಳೆಯ ಮರದಪ್ಪನಿಗೆ ಬಳತೆಗೆದಿಟ್ಟಳು. ಆದರೂ ಹಣಮುನು ಎದ್ದು ಕೂಡ್ರಲಿಕ್ಕೆ ಪ್ರಯತ್ನಿಸತೊಡಗಿದನು. ಬಡಬಡಿಕೆಯು ಹೆಚ್ಚಾಯಿತು—' ಅವ್ವಾ... ಹೆದರ ಬೇಡ... ನಿಮ್ಮ... ಹೊಟ್ಟೆತುಂಬುವುದು... ನನ್ನ ಕೆಲಸ. ಅಪ್ಪಾ.. ಇಷ್ಟುದಿವಸ... ನಮಗಾಗಿ.... ಕಷ್ಟಪಟ್ಟಿರಿ.... ಕೆಲಸ ಹುಡುಕುವೆನು. ಹುಬ್ಬಳ್ಳಿಯಲ್ಲಿ... ಕೆಲಸ ... ಸಿಕ್ಕದಿದ್ದರೆ ... ಏನಾಗುವುದು. ... ಎಲ್ಲಿಯಾದರೂ... ಕೆಲಸ

ಹಿಡಿಯುವೆನು....ಅಪ್ಪಾ... ಭೀಮನಿಗೆ... ಬೈಯಬೇಡಿರಿ....ಅವನು... ಅಂತಃಕರಣದವನು....ಪದ್ಮಿಯನ್ನು...ಸಿರಿವಂತರ....ಮನೆಗೆ...ಕೊಡು ವೆನು...ನಿಮ್ಮ ಪೋಷಣೆ....ನನ್ನ ಹೊಣೆ.' ಎಂದು ಮುಂತಾಗಿ ಒಮ್ಮೆ ಸ್ಪಷ್ಟವಾಗಿ, ಒಮ್ಮೆ ಅಸ್ಪಷ್ಟವಾಗಿ ಬಡಬಡಿಸಹತ್ತಿದನು. ಹೆಂಡತಿ ಭೀಮರು ಹಾಲು ನೀರಿನಿಂದ ಉಪಚರಿಸುತ್ತ, ಹಣಮನನ್ನು ಹಿಡಿದು ಕೊಂಡು ಕಣ್ಣಿನಿಂದ ನೀರು ಸುರಿಸುತ್ತ ಕುಳಿತರು.

ಪದ್ಮಿಮಧ್ವರು ಹೆಂಡತಿಯ ಪಕ್ಕದಲ್ಲಿ ಗಾಬರಿಯಾಗಿ ಅಂಟಿ ಕೊಂಡು ಕುಳಿತರು. ದಿಗಿಲು ಬಡೆದ ನಾನು ರಾತ್ರಿಯನ್ನೆಲ್ಲ ಗೋಡೆಗೆ ಆತುಕೊಂಡೇ ಕಳೆದೆನು. ಮುಂಜಾವಿನಲ್ಲಿ ಡಾಕ್ಟರರು ತಾವಾಗಿಯೆ ಬಂದು ಹಣಮನನ್ನು ಪರೀಕ್ಷಿಸಿ, ಕಟ್ಟಿನ ಜ್ವರದ ಬಾಧೆಯೆಂದು ನಿರ್ಧ ರಿಸಿ, ಚುಚ್ಚಿ ಔಷಧ ಹಾಕಿದರು. ನಾನು ಮಧ್ಯಾಹ್ನದಲ್ಲಿ ತೀರ್ಥದ ಗುಟುಕು ಕೊಟ್ಟೆನು. ಆದರೂ ಹಣಮನ ಸ್ಮೃತಿದಪ್ಪಿ ಹೊಯ್ದಾಟ ಹೆಚ್ಚಾಗಿ ಧ್ವನಿಯು ತೀರ ಅಸ್ಪಷ್ಟವಾಯಿತು. ಹೃದಯದಲ್ಲಿ ತುಂಬಿಕೊಂಡಿದ್ದ ನಮ್ಮ ದುಃಖಕ್ಕೆ ಕೋಡಿಯೊಡೆಯಿತು. ನಾವು ದೊಡ್ಡದನಿಯಿಂದ ಅಳತೊಡಗಿದೆವು. ಅದನ್ನು ಕಂಡು ಪದ್ಮಿಮಧ್ವರು ನಮ್ಮನ್ನವಚಿಕೊಂಡು ಅಳಲಾರಂಭಿಸಿದರು. ನೆರೆಹೊರೆಯವರು ಅದನ್ನು ಕೇಳಿ ನಮ್ಮನ್ನು ಸಂತೈಸಲನುವಾದರು. ನನ್ನ ದುಃಖಕ್ಕೆ ಮುಖ ವೊಡೆಯಿತು. ಅಂದಿನ ಉದ್ವೇಗವನ್ನು ಇಂದು ನೆನೆದರೆ, ನನ್ನ ಮೈ ಜುಮ್ಮೆಂದು, ನವಿರು ನಿಮಿರುವುದು; ಕಂಠವು ಗದ್ಗದಿತವಾಗುವುದು; ಕಣ್ಣಿಂದ ತಾನಾಗಿಯೇ ನೀರು ಸುರಿಯುವುದು! ಹಣಮನಿಗೆ ನೆಟ್ಟ ಗಾಗುವುದೆಂದು ನೆರೆಯವರು ಸಮಾಧಾನ ಹೇಳಿದರೂ ನನ್ನ ಎದೆ ಯೊಡೆದು ದುಃಖವು ತೊರೆಯಾಗಿ ತಡೆಯಿಲ್ಲದೆ ಅಬ್ಬರದಿಂದ ಹರಿಯ ತೊಡಗಿತು. 'ಹಣಮ್ಯಾ, ನಿನ್ನ ಮೇಲೆಯೆ ಭಾರ ಹಾಕಿದ ನಮ್ಮ ಕೈ ನಡುನೀರಿನಲ್ಲಿಯೆ ಬಿಟ್ಟು ತೆರಳುವೆಯಾ. ನೀನು ತೊರೆದರೆ ನಮ್ಮ ಮುಗುದರ ಗತಿಯೇನು. ಹಣಮ್ಯಾ, ಉಣಲಿಲ್ಲ, ತೊಡಲಿಲ್ಲ, ಹಾಗೆಯೆ ಹೊರಟೆಯಾ? ಮಗನೆ ಆರಿದ ಹಳಸಿದ ಅನ್ನವನ್ನುಂಡು ಹೋಗುವೆಯಾ? ಮೈ ಮೇಲಿನ ಹರಕು ಬಟ್ಟೆಗಳು ನಿನಗೆ ತಪ್ಪಲಿಲ್ಲ.

ಹಿರಿಯ ಮಗನೆಂದು ಅಕ್ಕರತೆಯಿಂದ ಕೊಟ್ಟುದನ್ನು ತಂಗೆ ತಮ್ಮಂದಿ ರಲ್ಲಿ ಹಂಚಿ ಸುಖಿಸುತ್ತಿದ್ದೆಯಲ್ಲ. ಊರೆಲ್ಲ ನಿನ್ನ ಬುದ್ಧಿವಂತಿಕೆಯನ್ನು ಹೊಗಳುತ್ತಿದೆ. ನಿನ್ನ ಖರ್ಚು ನೀನೇ ತೀರಿಸಿಕೊಂಡೆ. ನಿನ್ನ ಹಣ ವನ್ನೇ ಬಳಸಿ ನಮ್ಮ ಹೊಟ್ಟೆ ಹೊತ್ತೆವಲ್ಲ. ನಿನ್ನ ಗಳಿಕೆ ಬೇಡ; ನಿನ್ನ ಐಶ್ವರ್ಯ ಬೇಡ. ಮುಪ್ಪಿನ ಮುಗುದರ ಮುಂಪೆ ಚಿಕ್ಕವ ನೀನು ಕಣ್ಣು ಮುಚ್ಚುವುದು ಉಚಿತವೆ? ಹಣಮ್ಯಾ, ಇಕೊ, ಕಣ್ಣೆವೆ ಹಳಚಿ ನೋಡು, ಈ ಕುಗ್ಗಿದ ನನ್ನ ಕಳೇವರ, ನೆಗ್ಗಿದೆಲು, ಸಡಲಿದ ತೊವಲು, ಈಗಲೊ, ಇನ್ನಾವಾಗಲೊ, ಎಂದು ಜೀವವು ಎಲ್ಲಿಯೊ ಅಡಗಿಕೊಂಡು ಕುಳಿತಿದೆ. ನಿನ್ನ ಮುಂದೆ ನಾನು ಕಣ್ಮರೆಯಾದರೆ ಸಾಕು. ಕುಲದೈವಾ, ಸ್ವಾಮಿ ನರಸಿಂಹಾ, ದಯಾಘನನೆ, ಭಕ್ತ ವತ್ಸಲನೆ, ನಿನ್ನ ಕಿಂಕರನನ್ನು ಕೊಂಡು ನನ್ನೀ ಕರುಳನ್ನು ಬದುಕಿಸ ಬಾರದೇ!' ಎಂದು ಪರಿಪರಿಯಾಗಿ ಮಗನ ಸದ್ಗುಣಗಳನ್ನು ಬಣ್ಣಿಸಿ ಮುಕ್ತಕಂಠವಾಗಿ ವಿಲಪಿಸಹತ್ತಿದೆನು. ಹೆಂಡತಿಯು, 'ಹಣಮ್ಯಾ, ನಿನ್ನ ಮದುವೆಯಾಗಿ ಸೊಸೆಯನ್ನೆಂದು ಕಾಣುವೆನೆಂದು ಹಂಬಲಿ ಸುತ್ತಿದ್ದೆನಲ್ಲ. ನನ್ನ ಬಯಕೆ ಬಯಲಾಯಿತಲ್ಲ. ನಿನಗೆ ಕೆಲಸ ಹತ್ತಿದ ಮೇಲೆ ಮದುಮಕ್ಕಳನ್ನು ಮರನೂರಿಗೆ ಒಯ್ದು ಅರಳೆಯ ಮರದಪ್ಪನಿಗೆ ಹರಕೆ ಮುಟ್ಟಿಸಬೇಕೆಂದು ಮಾಡಿದುದನ್ನು ಸುಳ್ಳು ಮಾಡುವೆಯಾ. ಶೂರ್ಪಾಲಿಯಲ್ಲಿ ಇನ್ನೆಂತು ಮೋರೆ ತೋರಿಸಲಿ! ಅವರಿಗೆ ಏನೆಂದು ಮಾತಾಡಲಿ!' ಎಂದು ಹಾಡಿ ಹಾಡಿ ಅಳತೊಡ ಗಿದಳು.

ಅಷ್ಟರೊಳಗೆ ಡಾಕ್ಟರರು ಬಂದು ಹಣಮುನನ್ನು ಪರೀಕ್ಷಿಸಿ ಅಳು ತ್ತಿರುವ ನಮಗೆ 'ನಿಮಗೇನು ಹುಚ್ಚು ಹಿಡಿದಿದೆಯೋ? ಸುಮ್ಮನೆ ಏಕೆ ಅತ್ತು ಗೊಂದಲ ಮಾಡುತ್ತಿರುವಿರಿ?' ಎಂದಂದು ಔಷಧ ಚುಚ್ಚುವ ಸಿದ್ಧತೆ ನಡಿಸಿದರು. ಹೆಂಡತಿಯು, 'ರಾಯರೆ ಹಣಮುನಿಗೆ ಚುಚ್ಚಿ ಚುಚ್ಚಿ ವ್ಯರ್ಥ ನೋವು ಮಾಡಬೇಡಿರಿ. ಅವನಿಗೆ ಅರಳೆಯ ಮರದಪ್ಪನ ತೀರ್ಥವೊಂದೇ ಸಾಕು' ಎಂದು ಡಾಕ್ಟರರ ಕೈಹಿಡಿಯ ಹೋದಳು. ಭೀಮನು ಅವಳನ್ನು ಸರಿಸಿ ಡಾಕ್ಟರರಿಗೆ ಚುಚ್ಚಲಿಕ್ಕೆ ಅನುವು ಮಾಡಿ

ಕೊಟ್ಟನು. ಅವರು, 'ರೋಗಿಗೆ ನಿದ್ರೆ ಬರತೊಡಗಿದೆ. ಬಾಯಿ ಮಾಡಿ ತೊಂದರೆ ಕೊಡಬೇಡಿರಿ' ಭೀಮನ ಕಡೆಗೆ ನೋಡಿ, 'ಒಳಗೆ ಯಾರನ್ನೂ ಬಿಡಕೂಡದು. ಎಚ್ಚರಿಕೆಯಾದಾಗೊಮ್ಮೆ ಈ ಔಷಧ ಕೊಡಬೇಕು. ಚಮಚೆ ಚಮಚೆ ನೀರು ಹಾಕಬೇಕು' ಎಂದು ಹೇಳಿ ಹೋದರು. ಭೀಮನು ಕೋಣೆಯೊಳಗಿಂದ ನಮ್ಮೆಲ್ಲರನ್ನು ಹೊರಗೆ ಹಾಕಿದನು. ತಾನೊಬ್ಬನೆ ಹಣಮನ ಆರೈಕೆ ಮಾಡುತ್ತ ಕುಳಿತನು. ನಾವು ತಡೆಯದೆ ಆಗಾಗ್ಗೆ ಒಳಗೆ ಹೋಗಿ ನೋಡಿ ಬರುವೆವು. ಅವನಿಗೆ ರಾತ್ರಿ ತಾಸು ಅರ್ಧತಾಸು ನಿದ್ರೆ ಹತ್ತುವುದು, ತಾಸರ್ಧತಾಸು ಎಚ್ಚರ ವಾಗುವುದು, ಹಾಗೆಯೆ ರಾತ್ರಿಯನ್ನೆಲ್ಲ ಬಾಯಿಯಲ್ಲಿ ಅಕ್ಕಿಯ ಕಾಳು ಹಾಕಿಕೊಂಡು ಕಳೆದೆವು!

ನಾಲ್ಕು ತಾಸು ಹೊತ್ತಾಯಿತು. ಡಾಕ್ಟರರೂ ಬಂದು ನೋಡಿ ಅಭಯಕೊಟ್ಟು ಹೋದರು. ನಾನು ತಲೆಯ ಹತ್ತರ ಕುಳಿತಿದ್ದೆನು. ಹೆಂಡತಿಯು ಅವನಿಗೆ ಸಹಜವಾಗಿ ಕಾಣುವ ಹಾಗೆ ಹಾಸಿಗೆಯ ಮೇಲೆ ಕುಳಿತಿದ್ದಳು. ಹಣಮನು ಕಣ್ತೆರೆದು ಆಕೆಯನ್ನು ನೋಡಿ 'ಅವ್ವಾ' ಅಂದನು. ಅವಳು 'ಇಲ್ಲಿಯೇ ಇದ್ದೇನೆ' ಎಂದು ಅವನನ್ನು ಅಪ್ಪಿ ಕೊಂಡಳು. ಆ ಬಳಿಕ ಅವನು 'ಅಪ್ಪನೆಲ್ಲಿ' ಎಂದು ಕೇಳಿದನು. 'ಇಲ್ಲಿಯೆ ಇದ್ದಾರೆ ಕಾಣುವುದಿಲ್ಲವೆ?' ಎಂದು ನನ್ನನ್ನು ತೋರಿಸಿದಳು. ಅವನು ನನ್ನ ಕಡೆಗೆ ನೋಡಿ ಸ್ವಲ್ಪ ಹೊತ್ತಿನಲ್ಲಿ ಕಣ್ಣು ಮುಚ್ಚಿದನು. ಭೀಮನು ನಮಗೆ ಹೆಚ್ಚಿಗೆ ಮಾತಾಡಕೂಡದೆಂದು ಎಚ್ಚರಿಕೆ ಕೊಟ್ಟನು. ಮತ್ತೆ ಅರ್ಧತಾಸಿಗೆ ಕಣ್ತೆರೆದು, 'ಅವ್ವಾ' ಎಂದನು. ಹೆಂಡತಿಯು 'ಹಣಮಾ ಮೈಯಲ್ಲಿ ಹೇಗಿದೆ' ಎಂದು ಕೇಳಿದಳು. ಹಣಮನು ಗೋಣು ಅಲ್ಲಾಡಿಸಿದನು. ಹೀಗೆಯೆ ಒಂದುದಿನ ಕಳೆದ ಬಳಿಕ ಮರು ದಿವಸ ರಾತ್ರಿ ಮೈತುಂಬ ಬೆವರು ಬಿಟ್ಟಿತು. ಜ್ವರ ನಿಂತುವು. ಎದ್ದು ಕೂಡ್ರಲಿಕ್ಕೆ ನಾಲ್ಕೆಂಟು ದಿವಸಗಳು ಹೋದುವು. ತಿರುಗಾಡಲಿಕ್ಕೆ ಒಂದು ತಿಂಗಳು ಹಿಡಿಯಿತು. ಸಂಪೂರ್ಣ ಸ್ವಾಸ್ಥ್ಯ ದೊರೆಯಲಿಕ್ಕೆ ಮತ್ತೊಂದು ತಿಂಗಳು ಗತಿಸಿಹೋಯಿತು.

## ೨ ಆತ್ಮಾರ್ಪಣೆಯ ಸಿದ್ಧತೆ

ಹಣಮುನ ಬೇನೆಯಲ್ಲಿ ಮರೆತ ಹೊಟ್ಟೆಯ ಎದೆಗುದಿಗೆ ಮತ್ತೆ ಕಳೆಯೇರತೊಡಗಿತು. ಡಾಕ್ಟರರ ಖರ್ಚನ್ನು ನೋಡಿದರೆ ಈ ಜನ್ಮದಲ್ಲಿ ಅವರ ಋಣ ಮುಟ್ಟಲಾರದೆಂದು ಮನವರಿಕೆಯಾಯಿತು. ಅಂಗಡಿಗಳೊಳಗಿನ ಉದ್ದರಿ ಮಿತಿಮೀರಿತು. ಹಣಮುನ ಬೇನೆಯ ಸಲುವಾಗಿ ತಡೆದ ಪುರಾಣವು ನಿಂತುಹೋಯಿತು. ಮಕ್ಕಳ ಶಿಕ್ಷಣಕ್ಕಾಗಿ ಇದ್ದಬಿದ್ದ ಒಂದು ಹೊಲವನ್ನೂ ಮಾರಿಕೊಂಡೆನು. ಮಕ್ಕಳಿಗೆ ನೋಕರಿಯಿಲ್ಲ. ಎಣ್ಣೆಯಿಲ್ಲ, ತುಪ್ಪವಿಲ್ಲ, ಕೈಯಲ್ಲಿ ಧೂಪಾರತಿಯೊಂದೇ ಉಳಿಯಿತು! ಮನೆಯಲ್ಲಿ ಒಂದಿತ್ತು ಒಂದಿಲ್ಲ; ಎರಡು ಒಪ್ಪೊತ್ತಿನ ಕಾಡು ಕೂಳಿನ ಕಿಂತಲು ತಿಂಬುಂಬುವ ಮಕ್ಕಳಿಗೆ ಫಲಾಹಾರಕ್ಕೆ ಒಂದೂ ಕಾಳಿಲ್ಲ. ನಮ್ಮ ಮೈಮೇಲೆ ಹೊಲೆದ ಹರಕು ಮಾಸಿದ ವಸ್ತ್ರಗಳು. ಮೈ ಮರ್ಯಾದೆಯನ್ನು ಕಾಯ್ದುಕೊಳ್ಳುವುದೂ ಕಷ್ಟಸಾಧ್ಯವಾಯಿತು. ಹಾಸಿಗೆ ಹೊದ್ದಿಕೆಗಳ ಮಾತನ್ನೇನು ಹೇಳುವುದು. ಚಳಿಮಳೆಗಾಳಿಗಳಿಂದ ನಮ್ಮನ್ನು ನರಸಿಂಹನೇ ರಕ್ಷಿಸುವುದು. ಹೆಂಡತಿಯು ಹರಕು ಸೀರೆ ಹಾಸಿಕೊಂಡು ಪಮ್ಮಿಯನ್ನು ಮಗ್ಗುಲಲ್ಲಿ ಬೆಚ್ಚಗಾಗಿ ಅವಚಿಕೊಂಡು ಮಲಗುವಳು. ನಾನು ಒಂದೇ ಚಾಪೆಯ ಮೇಲೆ ಮಧ್ವನನ್ನು ತಬ್ಬಿಕೊಂಡು ಮಕ್ಕಳ ನಡುವೆ ಒಂದೇ ಕಂಬಳಿಯನ್ನು ಹೊದ್ದುಕೊಂಡು ಮಲಗುವೆನು. ಇಂತಹ ನನ್ನ ದೈನ್ಯಾವಸ್ಥೆಯ ಸಿಂಹಾವಲೋಕನದಲ್ಲಿರುವಾಗ, ಹೆಂಡತಿ 'ನಾಳಿಗೆ ಕಟ್ಟಿಗೆಯಿಲ್ಲ, ಅಕ್ಕಿಯಿಲ್ಲ' ಎಂದಳು. ನಾನು ಉತ್ತರವನ್ನು ಕೊಡದೆ ಟೊಂಕಕ್ಕೆ ಕೈಹಚ್ಚಿ ನೋಡಿದೆನು. ಒಂದೇ ಪಾವಲಿ ಉಳಿದಿತ್ತು. ಮರುದಿನದ ಮಧ್ಯಾಹ್ನದ ವಿಚಾರ ಬಗೆಹರಿಯದೆ ಹತಾಶನಾಗಿ,

"ಇಷ್ಟು ದಿವಸದ ಮಾತು ಬೇರೆಯಾಯಿತು ಇನ್ನು ಮುಂದಿನ ಮಾತು ಬೇರೆ. ಹಣಮುನ ಬೇನೆಯ ಆಘಾತದಿಂದ ನನ್ನ ಧೈರ್ಯವೇ ಕುಂಠಿತವಾಗಿ ಹೋಗಿದೆ. ಎಷ್ಟು ಕಷ್ಟಬಟ್ಟರೂ ಸಂಸಾರದಲ್ಲಿ ಸುಖದ ಸುಳುವಿಲ್ಲ. ನಾನು ಇದ್ದು ಮಾಡುವುದಾದರೂ ಏನು? ದುಡಿಯುವ

ಹಾಗಿಲ್ಲ; ಗಳಿಸಿ ಮಕ್ಕಳಿಗೆ ಹೊಟ್ಟೆಗೆ ಹಾಕುವ ಹಾಗಿಲ್ಲ. ಹಣವು ಭೀಮರು ದೊಡ್ಡವರಾಗಿದ್ದಾರೆ. ಅವರಿಗೆ ಶಿಕ್ಷಣ ಕೊಡುವ ನನ್ನ ಕರ್ತವ್ಯವನ್ನು ಕೊನೆಗಾಣಿಸಿರುವೆನು. ಇನ್ನು ಮುಂದೆ ಅವರ ದೈವಕ್ಕೂ ಅವರಿಗೂ ಗಂಟು. ಅವರ ಮದುವೆಯ ವಿಚಾರ ನನಗೇಕೆ? ಹಣಗಳಿಸತೊಡಗಿದರೆ ಯಾರಾದರೂ ಕರೆದು ಕನ್ಯೆ ಕೊಡುವರು. ಗಂಡುಮಕ್ಕಳ ಮದುವೆಯಾಗದಿದ್ದರೆ ಮನೆತನಕ್ಕೆ ಯಾವ ಕುಂದೂ ಇಲ್ಲ. ಮೋರೆ ಮೇಲಕ್ಕೆತ್ತಿ ಮೆರೆಯುವ ಎಷ್ಟೋ ಮುದುಪ ಮುಂಜಿವೆ ಮಣಿಗಳು ಇರುವುದುಂಟು. ಇದ್ದು ಬಿದ್ದು ಪಮ್ಮಿಯ ಲಗ್ನ, ಮಧ್ವನ ಶಿಕ್ಷಣ ಇವುಗಳ ವಿಚಾರ—ಹೆಣ್ಣುಮಕ್ಕಳೇನು ಯಾರ ಮನೆಯಲ್ಲಿ ನೂಕಿದರೂ ಹೊರಟು ಹೋಗುವರು. ಹೆಣ್ಣೆಂದರೆ ಹಲುಬಿ ಬಾಯ್ದೆರೆಯುವ ಎಷ್ಟೋ ವರಗಳು ಚಾತಕಪಕ್ಷಿಯಂತೆ ಅಲೆಯುತ್ತಿರುವುವು. ಶಿಕ್ಷಣದ ಅನುಭವದ ಮಾತು ಮತ್ತೇಕೆ? ಮಧ್ವನು ಕಲಿತರೂ ಅಷ್ಟೇ ಬಿಟ್ಟರೂ ಅಷ್ಟೇ. ದೈವವು ಅನುಕೂಲವಾಗಿದ್ದರೆ ಹಣವು ತಾನಾಗಿ ಹರಿದು ಬರುವುದು. ಕೊನೆಗೆ ಹೆಂಡತಿಯ ವಿಷಯ—ಆವಳಿಗೇನು ಕಡಿಮೆ? ಮೂವರು ಗಂಡುಮಕ್ಕಳಿದ್ದಾರೆ, ಇಬ್ಬರು ಹೆಣ್ಣುಮಕ್ಕಳಿದ್ದಾರೆ, ತಮ್ಮಂದಿರಿದ್ದಾರೆ. ಯಾರಾದರೂ ಅವಳ ಅನ್ನವಸ್ತ್ರದ ಕಷ್ಟ ಕಳೆಯಬಹುದು. ಇನ್ನು ಜನಾಪವಾದದ ವಿಚಾರ—ಶೂರ್ಪಾಲಿಯ ಪೌರಾಣಿಕ ಆಚಾರ್ಯರು ದುರ್ಮರಣ ಮಾಡಿಕೊಂಡರೆಂದು ತೆಗಳುವುದು. ಈ ಜನ್ಮವನ್ನೇ ತೊರೆದು ಕಣ್ಮರೆಯಾದ ನನಗೆ ಅವರ ಹೊಗಳಿಕೆ ತೆಗಳಿಕೆಗಳು ಕೇಳ ಬರುವುದೆಂತು? ಆತ್ಮಹತ್ಯೆಯಿಂದ ಜೀವಕ್ಕೆ ಪಿಶಾಚಯೋನಿಯು ಪ್ರಾಪ್ತವಾಗುವುದೆಂದು ಶಾಸ್ತ್ರವು ಹೇಳುವುದುಂಟು. ಆತ್ಮನು ಅನೇಕ ಯಾತನೆಗಳಿಗೆ ಈಡಾಗುತ್ತಾನೆ. ನಿಜ. ಆದರೆ ನನ್ನೀ ಯಮಯಾತನೆಗೆ ಕೊನೆಯೆ ಇಲ್ಲವಲ್ಲ? ಯಾತನೆಯಲ್ಲಿ ಸಮಗ್ರವಾಗಿ ಒಂದು ತಪ ಕಳೆದು ನುರಿತ ನನಗೆ ಯಾವ ಯಾತನೆಯ ಅಂಜಿಕೆ ಉಳಿದಿರುವುದಿಲ್ಲ!' ಸಂತೆಯೊಳಗೆ ಹೆಣ್ಣುಮಕ್ಕಳು ಬೆಣ್ಣೆಯನ್ನು ತೂಗುವಂತೆ ಈ ಸಾಧಕ ಬಾಧಕ ಪ್ರಮಾಣಗಳನ್ನು ತೂಗಿ ನೋಡಿದೆನು. ಈ ಪೂರ್ವಪಕ್ಷ ಉತ್ತರಪಕ್ಷಗಳ ದ್ವಂದ್ವದಲ್ಲಿ ಆತ್ಮಾರ್ಪ

ಣೆಯೇ ಸಿದ್ಧವಾಯಿತು. ರಾತ್ರಿಯಲ್ಲಿ ಉರ್ಲು ಹಾಕಿಕೊಂಡು ಅಸು ದೊರೆಯಬೇಕೆಂಬುದನ್ನು ನಿಶ್ಚಯಿಸಿದೆನು.

ರಾತ್ರಿಯಾಯಿತು. ತಲೆನೋವು ಎದ್ದುದರಿಂದ ಊಟವಿಲ್ಲೆಂದು ಹೆಂಡತಿಗೆ ತಿಳಿಸಿಬಿಟ್ಟೆನು. ಸಂಧ್ಯಾವಂದನೆ ಮಂಗಳಾರತಿ ಮಾಡಿ ನರಸಿಂಹನ ಸ್ತೋತ್ರವನ್ನು ಸಂಪೂರ್ಣವಾಗಿ ಪಠಿಸಿದೆನು. ಅಲ್ಲಿಯೆ ಗೂಟಕ್ಕೆ ಹಾಕಿರುವ ಹಗ್ಗದ ಸಿಂಬೆಯನ್ನು ಸಿರೀಕ್ಷಿಸಿ ದೇವರ ಪೆಟ್ಟಿಗೆಗೆ ಸಮ್ಮುಖವಾಗಿರುವ ತೊಲೆಗೆ ಜೋತುಬಿಟ್ಟು ಅದು ಗಟ್ಟಿಯಾಗಿರುವುದನ್ನು ಪರೀಕ್ಷಿಸಿದೆನು. ಕೆಲಸ ತೀರಿಸಿಕೊಂಡು ಹೆಂಡತಿಯು ಬಂದು ಫಲಾಹಾರವನ್ನಾದರೂ ಮಾಡಬೇಕೆಂದು ಆಗ್ರಹ ಮಾಡಿದರೂ ಹಸಿವು ಇಲ್ಲವೆಂದು ಆಕೆಯ ಬೇಡಿಕೆಯನ್ನು ನಿರಾಕರಿಸಿದೆನು. ಹೆಂಡತಿ ಮಕ್ಕಳೆಲ್ಲರು ಮಲಗಿಕೊಂಡರು. ನನಗೆ ಮಾತ್ರ ನಿದ್ರೆ ಹತ್ತಲಿಲ್ಲ. ಎಲ್ಲರಿಗೂ ನಿದ್ರೆ ಹತ್ತಿದೆಯೊ ಇಲ್ಲವೊ ಎಂಬುದನ್ನು ನೋಡಲು ಎದ್ದು ಕೂಡ್ರುವೆನು, ಪುತ್ತೆ ಮಲಗುವೆನು. ಕೊನೆಗೆ ಹಾಸಿಗೆಯಿಂದ ಸುಮಾರು ಎಂಟು ತಾಸು ರಾತ್ರಿಗೆ ಮೆಲ್ಲನೆಯೆದ್ದು ದೇವರ ಹತ್ತರ ಹೋದೆನು. ಅಲ್ಲಿರುವ ಮಿಣುಕು ಮಿಣುಕಾಗಿರುವ ನಂದಾದೀಪವನ್ನು ಮುಗುಚಿ ದೇವರ ಮುಂದೆ ನಿಂತು, 'ಸ್ವಾಮಿ ನರಸಿಂಹನೇ, ಇಷ್ಟು ದಿವಸಗಳ ವರೆಗೆ, ನಿನ್ನ ಭಕ್ತನಾದ ನಾನು, ನಿನ್ನ ಅನುಗ್ರಹ ಇಂದು ನಾಳೆಯೆಂದು ಸತ್ಕರ್ಮಗಳಲ್ಲಿ ಕಾಲ ಕಳೆದೆನು. ನನ್ನ ಆತ್ಮಕ್ಕೂ ಕುಲಕ್ಕೂ ಧರ್ಮಕ್ಕೂ ಯಾವ ಕಲಂಕವೂ ತಟ್ಟದಂತೆ ಜಾಗರೂಕತೆಯಿಂದ ಸಂಸಾರ ಸಾಗಿಸಿದೆನು. ಹೊಟ್ಟೆಯ ಪಾಡಿಗಾಗಿ ಹೊಲ್ಲದ ಹೊಲಬನ್ನವಲಂಬಿಸಿ ಈ ತನುವನ್ನು ಪಾಪಕ್ಕೆಳಸಲಿಲ್ಲ. ನರಸಿಂಹಾ, ಅಲ್ಲದ ಮಾರ್ಗವನ್ನು ತುಳಿದು ಹಣಗಳಿಸುವವರಿಗೆ ಉತ್ತರೋತ್ತರ ಉತ್ಕರ್ಷ ತೋರಿಸುತ್ತಿರುವೆ. ಸದಾಚಾರಿಯಾಗಿ ಬಡವನಾದ ನಿನ್ನ ಸದ್ಭಕ್ತನಿಗೆ ಕೊನೆಗೆ ನಿರಾಶೆಯೆ? ದೇವಾ, ನನ್ನ ಪ್ರಾರಬ್ಧವು ಇನ್ನೂ ಪರಿಪೂರ್ತಿ ಹೊಂದಿರುವುದಿಲ್ಲವೆ? ನಿನ್ನೀ ಕಿಂಕರನ ಆಶೆಯು ಇಹ ಲೋಕದಲ್ಲಿ ತಿಲಮಾತ್ರವೂ ಉಳಿದಿರುವುದಿಲ್ಲ! ಕರುಣಾಸಾಗರನೆ,

ಈ ಪರಮ ಪಾಪಿಷ್ಟನಿಗೆ ನಿನ್ನ ಉದರದಲ್ಲಿ ಸ್ಥಾನವನ್ನು ಕೊಟ್ಟು ಕಾಪಾಡು. ನಿನ್ನ ಹೊರ್ತು ನನಗಿನ್ನಾರು ಗತಿ!' ಎಂದು ಪ್ರಾರ್ಥಿಸಿ, ಹಗ್ಗದ ಸುರಳಿಗೆ ಕೈದುಡುಕ ಹೋಗಲು, ಹಲ್ಲಿಯು 'ಚಿಪ್, ಚಿಪ್' ಎಂದು ನುಡಿಯಿತು. ಅದಕ್ಕೆ ಕಿವಿಗೊಡದೆ ಹಗ್ಗವನ್ನು ಹಿಡಿದೆನು. ಅದೇ ಗೂಟಕ್ಕೆ ನೆಲುವಿನಲ್ಲಿ ನೇತಾಡುವ ಕಟ್ಟುವ ಬುಟ್ಟಿಯೊಳಗಿನ ಭಾಂಡಿಗಳು ನೆಲಕ್ಕುರುಳಿ ಅಬ್ಬರಿಸಿದುವು. ಹೆಂಡತಿಯು ಥಟ್ಟನೆ ಎಚ್ಚತ್ತು ದೀಪ ಹಚ್ಚಿ ಒಳಗೆ ಬಂದೊಡನೆ ಹಗ್ಗವು ತಾನಾಗಿಯೆ ನನ್ನ ಕೈ ಬಿಟ್ಟಿತು. ಆಕೆಯು 'ನೀವಿರುವಿರಾ, ಅರಳಿಟ್ಟಿಗೆ ಬೆಲ್ಲವಿಲ್ಲ. ಮೊದಲೇ ಹೇಳಲಿಕ್ಕೆ ಮರೆತಿದ್ದೆನು. ಮೇಲಾಗಿ ರಾತ್ರಿಯಾಗಿದೆ' ಎಂದಳು. ಅದನ್ನು ಕೇಳಿ ನಾಚಿಕೊಂಡು ನಾನು ಹಾಸಿಗೆಯ ಮೇಲೆ ಬಂದು ಕುಳಿತೆನು. ಹೆಂಡತಿಯು ತಾನು ಕಂಡ ಕನಸಿನ ವೃತ್ತಾಂತವನ್ನು ಹೇಳತೊಡಗಿದಳು—'ನಾವೆಲ್ಲರು ಶೂರ್ಪಾಲಿಗೆ ಹೋದ ಹಾಗೆ ಆಗಿತ್ತು. ನದಿಯೊಳಗೆ ನಾನು ಸೀರೆಯನ್ನು ಒಗೆಯುತ್ತ ನಿಂತಿದ್ದೆನು. ಹಣಮನು ಈಜುತಿದ್ದನು. ಅವನು ಮುಳುಗುತ್ತಿರುವುದನ್ನು ಕಂಡು ನಾನು ಬಾಯಿ ಮಾಡಿದೆನು. ಹತ್ತಿರದಲ್ಲಿದ್ದ ಒಬ್ಬ ಬ್ರಾಹ್ಮಣನು ಅವನ ರಟ್ಟೆಯನ್ನು ಹಿಡಿದು ದಂಡೆಗೆ ತಂದು ಮುಟ್ಟಿಸಿದನು. ಸಂಕಟದಿಂದ ಪಾರಾದ ಹಣಮುನನ್ನು ಅರಳೆಯ ಮರದಪ್ಪನ ಗುಡಿಗೆ ನಮಸ್ಕರಿಸಲು ಕರೆದುಕೊಂಡು ಹೋದೆನು. ಅರ್ಚಕರು ಅವನ ಬೊಗಸೆಯಲ್ಲಿ ಮಂತ್ರಾಕ್ಷತೆಗಳೊಂದಿಗೆ ಒಂದು ಕೊಬ್ಬರಿಯ ಬಟ್ಟಲವನ್ನು ಹಾಕಿದರು. ಅಷ್ಟರಲ್ಲಿ ಪಾತ್ರೆಗಳ ಸಪ್ಪಳವಾದುದರಿಂದ ಎಚ್ಚತ್ತೆನು' ಎಂದು ಹೇಳಿ, 'ಕನಸು ಶುಭವಾಗಿದೆಯೋ' ಎಂದು ಕೇಳಿದಳು. ನಾನು 'ಕನಸೋ, ನೆನಸೋ, ಅದೇ ವಿಷಯವನ್ನು ವಿಚಾರಿಸುತ್ತ ಕುಳಿತರೆ ಅಂತಹವೇ ಕನಸುಗಳು ಬೀಳುವುವು. ಅದರಲ್ಲೇನಿದೆ' ಎಂದು ಉತ್ತರ ಕೊಟ್ಟೆನು. ಹೆಂಡತಿಯ ಹರಟೆಯಲ್ಲಿ ರಾತ್ರಿಯೆ ಸಂದುಹೋಯಿತು. ನನಗೆ ಸಾಯಲಿಕ್ಕೆ ಸಮಯವೇ ಒದಗಲಿಲ್ಲ. ಸಾವಿಗೂ ನಿರಾಶೆಯೆ! ಎಂದು ಬೆರಗಾಗಿ ಕುಳಿತೆನು!

ಸ್ನಾತರ್ವಿಧಿ ತೀರಿಸಿಕೊಂಡು ತುಳಸಿಯ ಗಿಡಕ್ಕೆ ನೀರೆರೆದು ಪ್ರದಕ್ಷಿಣೆ ನಮಸ್ಕಾರ ಮಾಡಿ ಚಾಪೆಯ ಮೇಲೆ ಚೌಕಾಸನ ಹಾಕಿ ಮತ್ತೆ ವಿಚಾರದಲ್ಲಿ ಮಗ್ನನಾದೆನು. ಅಷ್ಟರೊಳಗೆ ಪಟ್ಟೆಗಾರ ಲಕ್ಷ್ಮಣ ಸಾನ ಹೆಂಡತಿ ಬಿಕ್ಕೂಬಾಯಿಯು ಒಂದು ಪರಾತ ತುಂಬ ಉಲುಪೆ ಯನ್ನು ನನ್ನ ಮುಂದಿರಿಸಿ ಒಂದು ರೂಪಾಯಿ ಕೊಟ್ಟು, 'ಆಚಾರ್ಯರೆ, ನಿಮ್ಮ ಹೇಳಿಕೆಯಂತೆ, ನಮ್ಮ ಸೊಸೆಯು ನಿನ್ನೆ ರಾತ್ರಿ ಮೂರು ಗಂಟೆಗೆ ಗಂಡು ಕೂಸನ್ನು ಹೆತ್ತಳು. ಹೋಳಿಗೆ ಮಾಡಿ ಊಟ ವಾಗಬೇಕು' ಎಂದಳು. 'ಚೆನ್ನಾಯಿತು. ನಿನ್ನೆ ರಾತ್ರಿಯ ಎಂಟು ತಾಸಿನ ಮುಹೂರ್ತವು ಚೆನ್ನಾಗಿದೆ! ಮಗುವು ದೈವವಂತನಾಗುವನು!' ಎನ್ನುವಷ್ಟರಲ್ಲಿ ಹೆಂಡತಿಯು ಬಿಕ್ಕೂಬಾಯಿಗೆ ಕುಂಕುಮ ಕೊಟ್ಟು ಕಳುಹಿ, ಬೆಣ್ಣೆಯನ್ನು ನೋಡಿದ ಹಸಿದ ಬೆಕ್ಕಿನಂತೆ, ನನ್ನ ಮುಂದಿನ ಪರಾತವನ್ನು ಎತ್ತಿಕೊಂಡು ಒಳಗೆ ಹೋದಳು! ಈ ಘಟನೆಯಿಂದ ನನ್ನ ವಿಚಾರವು ಇಮ್ಮಡಿಸಿತು—'ನಿನ್ನೆ ರಾತ್ರಿ ಎಂಟು ತಾಸಿಗೆಯೇ ನಾನು ನಾಮಶೇಷವಾಗಬೇಕೆಂದು ಏಳಬೇಕೇಕೆ? ಅದೇ ಸಮಯದಲ್ಲಿ ಹಲ್ಲಿಯು 'ಚಿಪ್ ಚಿಪ್,' 'ಸುಮ್ಮನಿರು, ಸುಮ್ಮನಿರು,' ಎಂದು ನುಡಿಯಬೇಕೇಕೆ? ಪಾತ್ರೆಗಳು ನನ್ನ ಕಾಲ ಮೇಲೆ ಬಿದ್ದು ಅಬ್ಬರಿಸ ಬೇಕೇಕೆ? ಹೆಂಡತಿಗೆ ಶುಭಸೂಚಕ ಸ್ವಪ್ನ ಆಗ ತಾನೆ ಬೀಳ ಬೇಕೇಕೆ? ನನ್ನ ನಾಶದ ವೇಳೆಯಲ್ಲಿ ಅವಳಿಗೆ ಎಚ್ಚರವಾಗಬೇಕೇಕೆ? ಮೇಲಾಗಿ ಅದೇ ಸಮಯದಲ್ಲಿ ಬಿಕ್ಕೂಬಾಯಿಯ ಮೊಮ್ಮಗನ ಜನನ ವಾಗಬೇಕೇಕೆ? ಆಶ್ಚರ್ಯ! ಮಹದಾಶ್ಚರ್ಯ!!

ಹೆಂಡತಿಯು ಹೋಳಿಗೆಯ ಅಡುಗೆಯಲ್ಲಿ ತೊಡಗಿದಳು. ನಾನು ದೇವತಾರ್ಚನೆ ಮಾಡುತ್ತ ಕುಳಿತೆನು. ಆರು ತಾಸಾಯಿತು. ಟಪಾಲದ ವನು ಒಂದು ಲಕ್ಕೋಟೆಯನ್ನು ಒಗೆದು ಹೋದನು. ಹಣಮನು ಅದನ್ನೊಡೆದು ಓದಿ ಕೆಲಸ ಹತ್ತಿತೆಂದು ನುಡಿದು ಪತ್ರವನ್ನು ಭೀಮನ ಕೈಯಲ್ಲಿ ಕೊಟ್ಟನು. ಭೀಮನು ಅಡುಗೆಯ ಮನೆಗೆ ಬಂದು, 'ಹಣಮನಿಗೆ ಇಲ್ಲಿಯ ಕಲೆಕ್ಟರರ ಕಚೇರಿಯಲ್ಲಿ ಕೆಲಸ ಹತ್ತಿತು. ನಾಳೆ

ಮೊದಲನೆಯ ತಾರೀಖಿನಿಂದ ಹಾಜರಾಗಲಿಕ್ಕೆ ಅವನಿಗೆ ಹುಕುಮು ಬಂದಿದೆ,' ಎಂದೊಡನೆ ಹೋಳಿಗೆ ಲಟ್ಟಿಸುತ್ತಿರುವ ಹೆಂಡತಿಯು ಹಣಮನ ಕಡೆಗೆ ಹಾರಿ ಹೋಗುವಾಗ ಕಾಲು ತಾಕಿ ನೀರಿನ ಕೊಡ ಉರುಳಿತು; ಹಂಚಿನ ಮೇಲಿನ ಹೋಳಿಗೆ ಕರಿಕಾಯಿತು; ಒಲೆಯ ಮೇಲಿನ ಹಾಲು ಉಕ್ಕಿ ಹೋಯಿತು. ನಾನು ಇದ್ದೆಲ್ಲ ಬತ್ತಿಗಳನ್ನು ಹಾಕಿ ದೇವರಿಗೆ ತಿರುತಿರುವಿ ಮಂಗಳಾರತಿ ಮಾಡಿದೆನು!

# ಭಾರತಯುದ್ಧ

## ೧ ಘುರಯೋಜನೆ

ಸಂಸಾರವು ಸುಖಮಯವೆಂದು ಕೆಲವರು, ದುಃಖಮಯವೆಂದು ಕೆಲವರು ಪ್ರತಿಪಾದಿಸುವುದುಂಟು. ನಿಜವಾಗಿ ನೋಡಿದರೆ ಸಂಸಾರದಲ್ಲಿ ನಿರ್ದುಷ್ಟವಾದ ಸುಖವೂ ಇಲ್ಲ, ದುಃಖವೂ ಇಲ್ಲ. ಈ ಸಂಸಾರವು ಸುಖದುಃಖಗಳ ಕಲಸುಮೆಲ್ಲೋಗರ. ಗಾಳಿಗೊಡ್ಡಿದ ಪಟದಂತೆ ಸಾಂಸಾರಿಕರ ಮನಸ್ಸು ಸುಖದುಃಖಗಳ ಸಂವೇದನೆಯಿಂದ ಇತ್ತೊಮ್ಮೆ ಅತ್ತೊಮ್ಮೆ ಚಲಿಸುವುದುಂಟು. ದ್ವಂದ್ವಾತೀತರಾದ ಯೋಗಿಗಳು ಮನಸ್ಸನ್ನು ಸ್ಥಿರವಾಗಿರಿಸಿ ನಿಜ ಶಾಂತಿಯನ್ನು ಪಡೆಯುವರು. ಮನಸ್ಸಿಗೆ ಮನವೇ ಆಧಾರ. ಆದುದರಿಂದ ನಾನು ವೈರಾಗ್ಯದ ಮಾರ್ಗವನ್ನು ಅವಲಂಬಿಸಬೇಕೆಂದು ನಿಶ್ಚಯಿಸಿ, ಅದಕ್ಕೆ ಅನುಕೂಲವಾಗಬೇಕೆಂದು ಒಂದೊಂದು ಕೆಲಸವನ್ನು ತೀರಿಸುವುದರಲ್ಲಿ ತೊಡಗಿದೆನು.

ಹಣಮನಿಗೆ ಕೆಲಸ ಹತ್ತಿ ಒಂದು ತಿಂಗಳಾಯಿತು. ಅವನ ಎಪ್ಪತ್ತು ರೂಪಾಯಿಯ ಸಂಬಳ ನನ್ನ ಕೈಗೆ ಬಂದಿತು. ಮಾಳಮುರಡಿ

ಯಲ್ಲಿ ಒಂದು ಬಂಗ್ಲೆಯನ್ನು ಹಿಡಿದು ಅಲ್ಲಿ ಇರಲಿಕ್ಕೆ ಹೋದೆವು. ನಾಲ್ಕಾರು ತಿಂಗಳಲ್ಲಿ ಮನೆಯವರಿಗೆಲ್ಲ ಹೊಸ ವಸ್ತ್ರಗಳಾದುವು. ಅಲ್ಲಲ್ಲಿ ಕುರ್ಚಿ, ಕಪಾಟು, ಪಲಂಗಗಳು ಮನೆಯನ್ನಲಂಕರಿಸಿದುವು. ಮುಂಜಾವಿನಲ್ಲಿ ಸರಿಯಾಗಿ ಹತ್ತು ಗಂಟೆಗೆ ಊಟ. ಸಂಜೆಗೆ ಎಂಟು ಹೊಡೆದ ಕೂಡಲೆ ಎಲೆ ಬೀಳುವುವು. ಮಧ್ಯಾಹ್ನದಲ್ಲಿ ಫಲಾಹಾರ. ಒಕ್ಕಲುಗಿತಿಯು ಸೀರೆದೋತ್ರಗಳನ್ನು ಒಗೆಯುವಳು, ಪಾತ್ರೆ ತಿಕ್ಕುವಳು, ಮನೆ ಗುಡಿಸುವಳು, ಹಾಸಿಗೆ ಹಾಸುವಳು. ಕೆಲಸ ಕಡಿಮೆಯಾದುದರಿಂದ ಹೆಂಡತಿಯು ನನ್ನ ಫಲಾಹಾರವಾದೊಡನೆ ಪಮ್ಮಿಯನ್ನು ಕರೆದುಕೊಂಡು ಆ ಗುಡಿ ಈ ಗುಡಿಯೆಂದು ತಿರುಗಾಡಿ ಬರುವಳು. ಸಂಜೆಯ ಅಡುಗೆಯೂ ಎಂದು ತಪ್ಪುವುದೆಂದು ಹಾತೊರೆಯತೊಡಗಿದಳು. ನಾನು ಮಾತ್ರ ಎಲ್ಲಿಯೂ ಹೋಗದೆ ಮನೆ ಕಾಯುತ್ತ ಅದರ ಮುಂದಿನ ಅಂಗಣದಲ್ಲಿಯೆ ಅಲೆದಾಡುತ್ತಿರುವೆನು. ನನ್ನ ಮನೆ ನಿಜ ಗಾರ್ಹಸ್ಥ್ಯದ ಸ್ವರೂಪ ತಳೆಯತೊಡಗಿತು. ಬಳಕೆಯಾಗಿ ಬರಿದಾದ ಕುಂಟೆಯನ್ನು ಒರತೆಯು ಮತ್ತೆ ತುಂಬಿ ತೆಗೆಯುವಂತೆ, ತಿಂಗಳ ಕೊನೆಗೆ ಬರಿದಾದ ನನ್ನ ಬೊಗಸೆಯನ್ನು ತಿಂಗಳ ಆದಿಯಲ್ಲಿ ಮಗನ ಸಂಬಳವು ತುಂಬಿ ತೆಗೆಯುವುದು. ಬರುವವರೆಲ್ಲರು, 'ಶೂರ್ಪಾಲೀ ರಾಯರು ಎಲ್ಲಿದ್ದಾರೆ?' ಎಂದು ನನ್ನನ್ನೇ ಕೇಳುವರು. ಆಗ ನಾನು ಮನದಲ್ಲಿ, 'ಶೂರ್ಪಾಲಿಯಲ್ಲಿ ರಾಯರಿದ್ದರೆ ಬಂಜೆಗೆ ಮಕ್ಕಳೇಕೆ ಇರಬಾರದು; ಒಡ್ಡರಲ್ಲಿ ಕುಪ್ಪಸಗಳೇಕೆ ದೊರೆಯಬಾರದು!' ಎಂದು ವಿಸ್ಮಯ ಪಡುವೆನು. ಮನೆಯಲ್ಲಿ ನನ್ನ ಹಿರಿತನವು ಕಳೆಗುಂದತೊಡಗಿತೆಂದು ಅನಿಸಿದರೂ ಮಗನಿಂದ ಮನೆ ಮುಂದೆ ಬಂದಿತೆಂದು ತಿಳಿದು ಸಂತೋಷದಲ್ಲಿರುವೆನು.

ಹಣಮನಿಗೆ ಹೆಣ್ಣು ಬರತೊಡಗಿದುವು. ಒಳ್ಳೆಯವರ ಆಚಾರವಂತರ ಮಗಳನ್ನು ಹುಡುಕಿ ನಿಶ್ಚಯಿಸಬೇಕೆಂದು ನನ್ನ ಮನೀಷೆ. ಹೆಚ್ಚು ವರದಕ್ಷಿಣೆಗೆ ತರುವ ಮಾಡಮುಟ್ಟುವವರ ಸೊಸೆಯಿರಬೇಕೆಂದು ಆಕೆಯ ಬಯಕೆ. ಹಣಮನಿಗೆ ಹೆಂಡತಿಯು ಸುಸ್ವರೂಪೆಯೂ

ಸುಶಿಕ್ಷಿತಳೂ ಇರಬೇಕೆಂಬ ಇಚ್ಛೆ. ನನ್ನ ಮನಸ್ಸಿಗೆ ಬಂದ ಕನ್ಯೆಗೆ ಹೆಂಡತಿ ಹಣವುರ ವಿರೋಧ; ನಾನು ಹಾಗು ಹಣವುನು ಒಪ್ಪುವ ಹುಡುಗೆಗೆ ಹೆಂಡತಿಯು ವಿರೋಧ; ನಾನು ಮತ್ತು ಹೆಂಡತಿ ಉತ್ತಮ ಳೆಂದು ಅಂದ ಕನ್ಯೆಗೆ ಹಣವುನ ವಿರೋಧ. ಹೀಗಾಗಿ ಸಮಗ್ರ ಒಂದು ವರ್ಷವು ಕನ್ಯಾಪರೀಕ್ಷೆಯಲ್ಲಿಯೆ ಗತಿಸಿಹೋಯಿತು. ಮದುವೆಯನ್ನು ಆದಷ್ಟು ತೀವ್ರ ಮಾಡಬೇಕೆಂದು ನನ್ನ ಆತುರತೆಯಿದ್ದರೆ ಹೆಂಡತಿ ಯಲ್ಲಿ ಪ್ರತಿನಿತ್ಯ ಒಂದೊಂದು ಕನ್ಯೆ ನೋಡಬೇಕೆಂಬ ಹೆಮ್ಮೆ ತಲೆ ದೋರತೊಡಗಿತು. ಕೊನೆಗೆ ವರ್ಷಾಂತ್ಯದಲ್ಲಿ ನಮ್ಮ ಮತಗಳ ಮೊನೆಯು ಮೊಂಡಾಗಹತ್ತಿತು. ನಮ್ಮ ತ್ರೈಕೂಟಕ ಪಂದ್ಯದ ತಿರುಳು ಊರವರಿಗೆಲ್ಲ ಹೊಳೆದುಹೋಯಿತು!

ಒಂದುದಿನ ದೇಶಪಾಂಡೆ ರಾಮರಾಯರೆಂಬುವವರು ಬಂದು ತಮ್ಮ ಪರಿಚಯ ಮಾಡಿಕೊಟ್ಟು ಮಗಳ ಗೋತ್ರ ನಕ್ಷತ್ರಗಳನ್ನು ಹೇಳಿ, ಅವು ನಮ್ಮ ಮಗನಿಗೆ ಕೂಡಿಬರುವುದನ್ನು ನೋಡಿರೆಂದು ಅಂದರು. ನಾನು ನೋಡಿಕೊಂಡು ಗೋತ್ರ ನಕ್ಷತ್ರ ಗುಣಗಳು ಕೂಡಿ ಬರುತ್ತವೆಂದು ಉತ್ತರ ಕೊಟ್ಟೆನು. ಮರುದಿವಸ ಮುಂಜಾವಿನಲ್ಲಿ ಕನ್ಯೆ ನೋಡಲಿಕ್ಕೆ ರಾಮರಾಯರ ಮನೆಗೆ ಹೋದೆವು. ರಾಯರು ನಮ್ಮ ದಾರಿಯನ್ನೇ ನೋಡುತ್ತ ಕುಳಿತಿದ್ದರು. ಯಥಾಪ್ರಕಾರವಾಗಿ ಆದರಾತಿಥ್ಯವಾದೊಡನೆ ಕನ್ಯೆಯನ್ನು ಕರೆದು ತಂದು ನಮ್ಮ ಮುಂದೆ ಕೂಡ್ರಿಸಿದರು. ಕನ್ಯೆ ದೊಡ್ಡವಳು, ವರ್ಣಗೌರ, ಚೆಲುವೆ, ಉಟ್ಟದ್ದು ಇಳಕಲ್ಲಸೀರೆ, ಕೈಯಲ್ಲಿ ಜೋಡುಜೋಡು ಗೋಟು ಪಾಟಲಿಗಳು, ಕೊರ ಳೊಳಗೆ ಸರಿಗೆ ಗೆಜ್ಜೆಯ ಟೀಕೆ ಮಂಗಳಸೂತ್ರದ ಸಾಮಾನುಗಳು, ಹಣೆಯ ಮೇಲೆ ಢಾಳವಾದ ಉದ್ದ ಕುಂಕುಮ, ಮೇಲಾಗಿ ಅಡ್ಡ ಬೈತಿಲವಿಲ್ಲ! ಹೆಂಡತಿಯು ಒಂದೆರಡು ಪ್ರಶ್ನೆ ಕೇಳಿ ಕನ್ಯೆಯು ಮಾತಾಡುವುದನ್ನು ಕೇಳಿದಳು. ಬರುವಾಗ ಎದ್ದುಹೋಗುವಾಗ ಹುಡುಗೆ ನಮ್ಮೆಲ್ಲರಿಗೆ ವಿನಯದಿಂದ ತಾರತಮ್ಯಾನುಸಾರವಾಗಿ ನಮಸ್ಕಾರ ಮಾಡಿ ಒಳಗೆ ಹೋದಳು. ರಾಮರಾಯರು ತಮ್ಮ ದೊಡ್ಡ ಮನೆ

ಯನ್ನು ತೋರಿಸಿದರು. ದೇವರ ಮನೆಯ ಮುಂದೆ ಬೆಳಗಿದ ಉಪ ಕರಣಗಳ ಪಂಕ್ತಿಯು ನನ್ನ ಚಿತ್ತವನ್ನು ವೇಧಿಸಿತು. ಹೆಂಡತಿಯು ನಾವು ತಂದ ಬೆಂಡು ಬತ್ತಾಸದ ಪುಡಿಕೆಯನ್ನೂ ಖಣವನ್ನೂ ಕನ್ಯೆಗೆ ಉಡಿ ತುಂಬಿದಳು. ನಾವು ಹೊರಟ ಕೂಡಲೆ ರಾಮರಾಯರು ಸಪತ್ನೀಕ ರಾಗಿ ನಮ್ಮನ್ನು ಕಳುಹಲು ಮನೆಯ ಕಟ್ಟೆಯವರೆಗೆ ಬಂದರು. ನಾವು ಟಾಂಗವನ್ನು ಹತ್ತಿ ಹೊರಟೆವು. ನಾನು 'ಏನೇ, ರಾಮರಾಯರ ಹೆಂಡತಿಯ ಹೆಸರೇನು?' ಎಂದು ಕೇಳಲು, ಅವಳು, 'ಸೀತಾ ಬಾಯಿ' ಎಂದಳು. 'ರಾಮನ ಹೆಂಡತಿ ಸೀತೆಯೆಂಬುದನ್ನು ನೀನು ನನಗೆ ಹೇಳಬೇಕೇ? ದೇಶಪಾಂಡೆ ರಾಮರಾಯರ ಹೆಂಡತಿಯ ಹೆಸರೇನು?' ಎಂದೆನ್ನಲು ಅವಳು, 'ಅವರ ಹೆಸರೇ ಸೀತಾಬಾಯಿ' ಎಂದಳು. 'ಒಳಿತು, ಅವರ ಚಕ್ಕುಲಿದುರುಬಿನ ಮೇಲಿರುವ ಕನಕ ಕಲಶದಂತಹ ಚವುರಿಯನ್ನು ನೋಡಿದೆಯಾ?' ಎಂದುದಕ್ಕೆ ಮೋರೆ ಗಂಟು ಹಾಕಿ, 'ಅವರ ತುರುಬಿನ ಮೇಲೇಕೆ ನಿಮ್ಮ ಲಕ್ಷ್ಯ' ಎಂದಳು. ನಾನು, 'ಸೀತಾಬಾಯಿಯು ಹಳೆಯ ಪದ್ಧತಿಯ ಆಚಾರವಂತೆ ಯೆಂದು ಹೇಳುವುದೇ ನನ್ನ ಅಭಿಪ್ರಾಯ' ಎಂದೆನು. ಹೆಂಡ ತಿಯು, "ಮನೆಯವರು ಇಷ್ಟುಳ್ಳವರಾಗಿ ತೋರುತ್ತಾರೆ. 'ನಿಮಗೆ ಚಹ ಬೇಕಾದರೆ ಮಾಡಿಕೊಡುತ್ತೇವೆ. ನಾವು ಚಹ ಕುಡಿಯ ದಿದ್ದರೂ ಮನೆಗೆ ಬರುವವರ ಉಪಚಾರಕ್ಕಾಗಿ ಅದರ ಸಾಮಗ್ರಿಯನ್ನು ಇಟ್ಟಿರುತ್ತೇವೆ,' ಎಂದು ಸೀತಾಬಾಯಿಯು ಕೇಳಿದುದಕ್ಕೆ ನಾನು, 'ಚಹದ ಹೆಸರು ತೆಗೆಯಬೇಡಿರಿ' ಎಂದು ಖಂಡಿತವಾಗಿ ಹೇಳಿದೆನು. ಮನೆಯವರು ಮಾಡಮಟ್ಟುವ ಮನವುಳ್ಳವರೆಂದು ತೋರುತ್ತದೆ" ಎಂದಳು. ಮನೆಗೆ ಹೋಗಿ ಹಣಮಾ, ಕನ್ಯೆ ನಮ್ಮಿಬ್ಬರ ಮನಸ್ಸಿಗೆ ಬಂದಿದ್ದಾಳೆ. ರಾಮರಾಯರು ಮೊಗಲಾಯಿಯೊಳಗಿನ ವತನದಾರ ದೇಶಪಾಂಡೆಯರ ಮನೆತನದವರು. ಮನೆಯಲ್ಲಿ ಬೆಳ್ಳಿ ಬಂಗಾರ ನೆಟ್ಟಿ ಗಿದ್ದಂತೆ ತೋರುತ್ತದೆ. ಮೇಲಾಗಿ ಆಚಾರವಂತರು. ಅವರ ಮನೆ ನೋಡಿದರೆ ಹರ್ಮ್ಯವಾಗಿದೆ. ಇಂದು ಸಂಜೆಗೆ ಹೋಗಿ ಕನ್ಯೆಯನ್ನು ನೀನೂ ನೋಡಿ ಬಾ. ನೀನು ಬರುವಿಯೆಂದು ಅವರಿಗೆ ಹೇಳಿ ಬಂದಿ

ದ್ದೇವೆ' ಎಂದೆನು. ಹಣಮನು 'ಒಳ್ಳೆಯದು' ಎಂದು ಉತ್ತರ ಕೊಟ್ಟನು. ಕಚೇರಿಯನ್ನು ತೀರಿಸಿಕೊಂಡು ಹಣಮನು ರಾಮರಾಯರ ಮನೆಗೆ ಹೋಗಿ ಕನ್ಯೆಯನ್ನು ಪರೀಕ್ಷಿಸಿ ಬಂದನು. ಅವನ ಮನಸ್ಸಿಗೆ ಅವಳು ಬಂದ ಹಾಗೆ ತೋರಿತು. ಯಾಕಂದರೆ, ಅವನಿಗೆ ಹೆಂಡತಿಯು ಆ ಕನ್ಯೆಯ ಬಗ್ಗೆ ಕೇಳಿದಾಗ ಅವನು 'ನಿಮ್ಮ ಮನಸ್ಸಿಗೆ ಬಂದರೆ ನನ್ನ ಅಡ್ಡಿಯಿಲ್ಲ; ಆದರೆ ಕನ್ಯೆ ಹೊಸ ಪದ್ಧತಿಯವಳಾಗಿರುವಂತೆ ತೋರುತ್ತದೆ. ಮುಂದೆ ಮನಸ್ತಾಪ ಬೇಡ. ಇನ್ನೊಮ್ಮೆ ವಿಚಾರಿಸಿ ನೋಡಿರಿ,' ಎಂದನು. ಅದಕ್ಕೆ ನಾನು, 'ಹಣಮಾ, ಆಚಾರವಂತರ ವತನದಾರರ ಕನ್ಯೆಗೆ ಹೆಸರಿಡುವೆಯಾ. ಅವಳಲ್ಲಿ ಈಗಿರುವಷ್ಟು ಹೊಸ ಪದ್ಧತಿಗೆ ನಮ್ಮ ಅಡ್ಡಿಯಿಲ್ಲ' ಎಂದರೂ ಮತ್ತೊಮ್ಮೆ ಹೋಗಿ ನೋಡಿ ಬಂದೆವು. ಆಗಲೂ ಅದುವೇ ದೃಶ್ಯ. ಹದಿನೈದು ನೂರು ರೂಪಾಯಿ ವರದಕ್ಷಿಣೆ ವರೋಪಚಾರ ಗೊತ್ತಾಗಿ ನಿಶ್ಚಯವಾಯಿತು. ಎಂಟೇ ದಿವಸಗಳಲ್ಲಿ ಲಗ್ನದ ಮುಹೂರ್ತ. ಶೂರ್ಪಾಲಿಗೆ ಪತ್ರ ಬರೆದು ನಾರಾಯಣನಿಗೆ ಸಹಕುಟುಂಬ ಬರಲಿಕ್ಕೆ ತಿಳಿಸಿದೆನು. ಬೆಳಗಾವಿಯಿಂದ ದಮ್ಮ ಅಳಿಯಂದಿರನ್ನು ಕರೆದುಕೊಂಡು ಬಂದೆನು. ರಾಮರಾಯರು ನಮಗೆ, 'ನೀವು ಕೈ ಬೀಸುತ್ತ ನುಗ್ಗಿಯಕೇರಿಗೆ ಬಂದರಾಯಿತು. ಅಲ್ಲಿಯ ಹನುಮಂತ ದೇವರ ಗುಡಿಯಲ್ಲಿ ಮದುವೆ ಮಾಡಿ ಬಿಡುತ್ತೇವೆ. ನಮ್ಮ ಮನೆಯಲ್ಲಿ ದುಡಿಯುವವರಿಲ್ಲ. ನಿಮ್ಮ ಮನೆಯಲ್ಲಿಯೂ ಇಲ್ಲ. ಒಂದು ದಿವಸದಲ್ಲಿ ಮದುವೆ ತೀರಿಸಿಕೊಂಡು ಮನೆಗೆ ಬಂದರಾಯಿತು' ಎಂದರು. ಅದನ್ನು ಕೇಳಿ, 'ಹೆಚ್ಚಿಗೆ ಯಾತಾಯಾತವಿಲ್ಲದೆ ಹದಿನೈದು ನೂರು ರೂಪಾಯಿ ಕಟ್ಟಿಕೊಂಡು ಬಂದರಾಯಿತು' ಎಂದು ತಿಳಿದು ಒಪ್ಪಿಗೆಯಿತ್ತೆನು. ಹೆಂಡತಿಯು ಗುಣುಗುಟ್ಟಿದರೂ ಆಕೆಗೆ ಸಿಟ್ಟು ಮಾಡಿ ಸುಮ್ಮನಿರಿಸಿದೆನು. ನಾಳೆ ಮುಂಜಾವಿನಲ್ಲಿ ಒಂಬತ್ತು ಗಂಟೆಗೆ ಸರಿಯಾಗಿ ಲಗ್ನದ ಮುಹೂರ್ತವೆಂದರೆ, ಇಂದು ಸಂಜೆಗೆ ನಮ್ಮ ಮನೆಯವರು, ನೆರೆಯ ಇಬ್ಬರು ವೆಂಕಟರಾಯರ ಹೆಂಡತಿ ಮತ್ತು ಅವರ ಇಬ್ಬರು ಚಿಕ್ಕಮಕ್ಕಳು ಹೀಗೆ ಹತ್ತು ಹನ್ನೊಂದು ಜನ ವರಪಕ್ಷದವರು ಮೋಟರು ಮಾಡಿಕೊಂಡು ಹೊರಟು ನುಗ್ಗಿಯಕೇರಿಯ ಗುಡಿಗೆ

ಹೋದೆವು. ಕನ್ಯೆಯ ಪಕ್ಷದವರು ಆರೇಳು ಜನ ಕಂಡಿತು. ಬಾರಿಸುವವರು ಊದುವವರು ಅಡುಗೆ ನೀರಿನವರು ಒಬ್ಬ ಸೇವಕ ಇವರ ಲೆಕ್ಕವನ್ನು ಹಾಕಿದರೆ ನಿಬ್ಬಣಿಗರ ಸಂಖ್ಯೆಯು ಇಪ್ಪತ್ತೈದಕ್ಕೆ ಮಿಕ್ಕಲಿಲ್ಲ. ರಾತ್ರಿ ಅರ್ಧ ತಾಸಿನಲ್ಲಿ ಎದುರುಗೊಳ್ಳುವುದು ಮುಗಿದು ರುಕ್ಮೋತದ ಭೂಮ ಬಡಿಸಿತು. ಸೀತಾಬಾಯಿಯವರೊಬ್ಬರೆ ಹಳೆಯ ಮಡಿಯನ್ನುಟ್ಟು ತುಪ್ಪ ಬಡಿಸಹತ್ತಿದರು. ಇಬ್ಬರು ಗಂಡುಟಿಗರು ಬಡಿಸಲನುವಾಗಲು, ಹೆಂಡತಿ ದಮ್ಮಿ ಪಮ್ಮಿಯರು, 'ಭೂಮ ಬಡಿಸುವ ಪದ್ಧತಿಯಿದುವೆ! ಸಮೆಯಿಲ್ಲ, ಇಪ್ಪ ಬಿಪ್ಪ ಹೋಳಿಗೆ ಹಾಕಲಿಕ್ಕೆ! ಎಲೆ ತುಂಬ ಚೆಂದ ಕಾಣುವಂತೆ ಮಂಡಗೆಯಿಲ್ಲ! ತುಪ್ಪ ದೊನ್ನೆಗೆ ಅಂಟಿಕೊಂಡು ಹೋಗಿದೆ!' ಎಂದು ಗಲಾಟೆಯೆಬ್ಬಿಸಿದರು. ರಾಮರಾಯರು ಗುಡಿಯ ಹೊರಗೆ ಹೋಗಿ ಕೃಷ್ಣಮುಖರಾದರು. ಸೀತಾಬಾಯಿಯವರು ಅಡುಗೆಯ ಮನೆ ಬಿಟ್ಟು ಬೀಗರಿಗೆ ಊಟವಾಗುವವರೆಗೆ ಮೋರೆಯನ್ನೇ ತೋರಿಸಲಿಲ್ಲ. ಬಡಿಸುವವರು 'ಎಲೆಯಲ್ಲಿ ಚರಗ ಚಲ್ಲಿದಂತೆ ಚಲ್ಲಬೇಡಿರಿ. ಬೇಕಾದುದನ್ನು ಒಂದಿಲ್ಲ ಎರಡು ಸಲ ಕೇಳಿರಿ. ವ್ಯರ್ಥ ಅನ್ನ ಹಾಳು ಮಾಡಬೇಡಿರಿ' ಎಂದು ಆಗಾಗ್ಗೆ ಸೂಚನೆ ಕೊಡುವರು. ಅದನ್ನೆಲ್ಲ ನಾನು ಅಲ್ಲಿಯೆ ದೂರದಲ್ಲಿ ನಿಂತು ನೋಡಿದೆನು. ನನಗೆ ಕೊಂಚ ಸಿಟ್ಟು ಬಂದಿತು ಹೆಂಡತಿಯು ಉರಿಮೊಗ ಮಾಡಿಕೊಂಡು ಕೈದೊಳೆದಳು. ಬಳಿಕ ಬೀಡಾರಕ್ಕೆ ಬಂದು ಬೀಗರಿಗೆ ಕೇಳ ಬರುವಂತೆ, 'ಅದು ಹಾಗಾಯಿತು, ಇದು ಹೀಗಾಯಿತು' ಎಂದು ಬಾಯಿ ಮಾಡತೊಡಗಿದಳು. ಆಕೆಯನ್ನು ಸಂತೈಸುವಷ್ಟರಲ್ಲಿ ರಾಮರಾಯರೆ ಬಂದು, 'ನಿಮ್ಮ ನಮ್ಮ ಶ್ರಮ ಉಳಿಸಬೇಕೆಂದು ಮದುವೆಯನ್ನು ಗುತ್ತಿಗೆ ಕೊಟ್ಟಿದ್ದೇನೆ' ಎಂದರು. ಅದನ್ನು ಕೇಳಿ, ವ್ಯರ್ಥ ಜಗಳ ಹೂಡುವುದರಲ್ಲಿ ಅರ್ಥವಿಲ್ಲವೆಂದು ಮನಗಂಡು ರಾಮರಾಯರಿಗೆ, 'ರಾಯರೆ, ಹೆಂಗಸರ ಮಾತಿನಲ್ಲಿ ಗಂಡಸರಾದ ನಾವು ಬಾಯಿ ಹಾಕುವುದು ಉಚಿತವಲ್ಲ,' ಎಂದು ಸಮಾಧಾನ ಹೇಳಿ ಕಳುಹಿಬಿಟ್ಟೆನು. ಮರುದಿವಸ ಮುಂಜಾವಿನಲ್ಲಿ ಮಂತ್ರಾಕ್ಷತೆಗಳು ಬಿದ್ದುವು. ಹಣಮನ ಮಿತ್ರರು ಅಧಿಕಾರಿಗಳಿಗೆ ಭೀಮನು ವ್ಯವಸ್ಥೆ ಮಾಡಿ ಫಲ

ಹಾರ ಹಾಕಿ ಕಳುಹಿ ಕೊಟ್ಟನು. ಮಧ್ಯಾಹ್ನದ ಭೋಜನದಲ್ಲಿ ಸ್ವತಃ ರಾಮರಾಯರೆ ಟೊಂಕ ಕಟ್ಟಿ ನಿಂತು. ಭೋಜನದಲ್ಲಿ ಒಂದೊಂದು ಹಿಡಿ ಅನ್ನ ಒಂದೊಂದು ದೊನ್ನೆ ಸಾರು ಪ್ರತಿಯೊಬ್ಬರೂ ಚೆಲ್ಲುವಂತೆ ಬಡಿಸಿದರು!

ಕನ್ಯಾದಾನದ ಕಾಲದಲ್ಲಿ ಸಲ್ಲತಕ್ಕ ವರದಕ್ಷಿಣೆಯು ಇನ್ನೂ ಬರಲಿಲ್ಲವೆಂದು ನಾನು ಸಾಡೆಯ ಸಮಯದಲ್ಲಿ ಗಟ್ಟಿ ಹಿಡಿದೆನು. ರಾಮರಾಯರು, 'ತಮ್ಮನು ಮೊಗಲಾಯಿಗೆ ರೂಪಾಯಿ ತರಲಿಕ್ಕೆ ಹೋದವನು ಇನ್ನೂ ಬರಲಿಲ್ಲ. ರಾತ್ರಿ ಬರಬಹುದು, ಇಲ್ಲವಾದರೆ ನಾಳೆ ಮುಂಜಾವಿನಲ್ಲಿ ಖಂಡಿತವಾಗಿ ಬರುವನು. ಅವನು ಬಂದ ಕೂಡಲೆ ಸಾವಿರ ರೂಪಾಯಿ ನಾನೇ ಬಂದು ಎಣಿಸುವೆನು' ಎಂದುದರಿಂದ ಕಾರ್ಯವು ಮುಂದೆ ಸಾಗಿತು. ಕೂಡಲೆ ಮನೆಗೆ ಹೋಗಿ ಮದುಮಕ್ಕಳನ್ನು ಮನೆದುಂಬಿಸಿಕೊಂಡೆವು. ಎಂಟು ಹತ್ತು ದಿವಸಗಳಲ್ಲಿ ಮೊಗಲಾಯಿಯನ್ನು ಸೇರಿದ ರಾಮರಾಯರ ಮೊಗವನ್ನು ಮುಂದೆ ಒಂದು ವರ್ಷದವರೆಗೆ ನಾವು ನೋಡಲೇ ಇಲ್ಲ. ರಾಮರಾಯರ ವಂಚನೆಗಾಗಿ ನಾವಿಬ್ಬರು ಸೊಸೆಯ ಮೇಲೆ ಸಿಟ್ಟು ಸಿಟ್ಟು ಹಾಯುವುದನ್ನು ಕಂಡು ಹಣಮನು, 'ಆದದ್ದಾಯಿತು. ಹಾಲು ಚೆಲ್ಲಿದ ಮೇಲೆ ಒದರಾಡುವುದರಲ್ಲಿ ಅರ್ಥವಿಲ್ಲ' ಎಂದು ನುಡಿದು ಆ ಮಾತನ್ನೇ ಮುರಿದು ಹಾಕಿದನು.

ಸೊಸೆಯು ಮನೆಗೆ ಬಂದುದರಿಂದ ಮನೆಗೆಲಸದಲ್ಲಿ ಬಿಡುವು ದೊರೆಯಿತೆಂದು ಹೆಂಡತಿಯು ಹಿಗ್ಗಿದಳು. ಹಣಮನ ಸಂಸಾರವು ಸುಖಮಯವಾಗಿ ಸಾಗುವುದೆಂದು ನನಗೂ ಸಂತೋಷವಾಯಿತು. ಚೆಲುವೆಯಾದ ಕಲಿತ ಹೆಂಡತಿ ದೊರೆತಳೆಂದು ಹಣಮನು ಹರ್ಷದಲ್ಲಿ ರತೊಡಗಿದನೆಂದು ತೋರಿತು. ನುಣ್ಣಗಾಗಿ ತೋರುವ ದೂರಿನ ಗುಡ್ಡದಲ್ಲಿ ಪ್ರತ್ಯಕ್ಷವಾಗಿ ಅಲೆದಾಡಹತ್ತಿದರೆ ಅಲ್ಲಿಯ ತೆಗ್ಗು ದಿಬ್ಬಗಳು, ಕಲ್ಲುದುಂಡಿಗಳು, ಕೆರೆತೊರೆಗಳು ತಲೆದೋರುವಂತೆ ಸೊಸೆಯ ನಡೆವಳಿಕೆಯು ದಿನವೊಂದಕ್ಕೆ ಅನುಭವಕ್ಕೆ ಬರತೊಡಗಿತು. ಮುಂಜಾ

ವಿನಲ್ಲೆದ್ದ ಕೂಡಲೆ ಚಹವಿಲ್ಲದಿದ್ದರೆ ಆಕೆಗೆ ತಲೆನೋವು. ಹೊರಗೆ ಹೊರಟಳೆಂದರೆ ಕಾಲಲ್ಲಿ ಚಪ್ಪಲಿಯಿಲ್ಲದೆ ಚಲಿಸುವುದು ದುಸ್ತರ. ಅಡ್ಡ ಬೈತಿಲ ಸಣ್ಣ ಕುಂಕುಮವಿಲ್ಲದಿದ್ದರೆ ಹೊರಗೆ ಮೋರೆ ತೋರಿಸಲಿಕ್ಕೆ ಪ್ರಾಣಸಂಕಟ. ಧಾವಳಿ ಉಟ್ಟು ನೀರಿನ ರಾಟೆಯನ್ನು ಗಾಣದ ಎತ್ತಿನಂತೆ ತಿರುಗಿಸುವುದನ್ನು ತಪ್ಪಿಸಲು ದಿನಕ್ಕೊಂದು ಚೆಂದ ನೆವ. ಇವೆಲ್ಲ ನಮ್ಮ ಮನಸ್ಸಿಗೆ ಬರದಿದ್ದರೂ ನಾವೇ ಮುಂದಾಗಿ ಹಣಮನ ಲಗ್ನ ಮಾಡಿದುದರಿಂದ ಅವನು ನಮಗೇನಾದರೂ ಅನ್ನಬಹುದೆಂಬ ಅಂಜಿಕೆಯಿಂದ ನಮ್ಮ ಉದ್ವೇಗವನ್ನು ಹೊಟ್ಟೆಯಲ್ಲಿ ಹೂಳಿಟ್ಟು ಇದ್ದೆವು. ಸೊಸೆಯು ಈ ರೀತಿಯನ್ನು ಬದಿಗಿರಿಸಿದರೆ, ಅವಳು ಮನೆಗೆಲಸದಲ್ಲಿ ದಕ್ಷಳು; ಹೆಂಡತಿಗೆ ತುಂಬ ಸಹಾಯಕಳು; ನನಗೆ ನಮ್ರಳು. ಆದರೆ ಅವಳಲ್ಲಿ ಮಡಿಮೈಲಿಗೆ ಎಂಜಲಮುಸುರೆಗಳ ತಾರತಮ್ಯ ಕಡಿಮೆ. ಒಮ್ಮೊಮ್ಮೆ ಸೊಸೆಯಿಂದ ಬಿರು ನುಡಿಗಳೂ ಬರುವುದುಂಟೆಂದು ಹೆಂಡತಿಯು ಆಗಾಗ್ಗೆ ನನ್ನ ಮುಂದೆ ದೂರು ಹೇಳುವಳು. ಅದಕ್ಕೆ ನಾನು ಕಿವಿಗೊಡಲಿಲ್ಲ. ಏಕೆಂದರೆ ಸೊಸೆಯು ನನ್ನ ಉಪಚಾರದಲ್ಲಿ ಏನೂ ಕೊರತೆಯಿಡುತ್ತಿರಲಿಲ್ಲ. ಮಗನ ಒಗೆತನ ನೋಡಿದರೆ ಗಂಡಹೆಂಡರಲ್ಲಿ ತೀರ ನೆಮ್ಮದಿ. ಸೊಸೆ ಪಮ್ಮಿಯರ ಸಖ್ಯ ದಿನವೊಂದಕ್ಕೆ ಕಳೆಯೇರತೊಡಗಿತು. ಹೀಗಾಗಿ ಸೊಸೆಯ ಪದ್ಧತಿಗೆ ಏನೆನ್ನುವುದು ಅರಿಯದೆ ಹೋಯಿತು! ಮಾನಿನಿಯರ ಮನದ ಡೊಂಕು ದೇವರಿಗೂ ತಿಳಿಯದಾಗ ಮನುಷ್ಯರಾದ ನಮ್ಮ ಪಾಡೇನು?

## ೨ ಜಾಮಾತೃಮರಣ

ಅದೇ ದಮ್ಮಿಯನ್ನ ನೋಡಿದರೆ ಅವಳ ಸ್ಥಿತಿ ಮಾಧ್ಯಮಿಕ. ಉಂಡುಟ್ಟು ಇದ್ದ ಒಬ್ಬ ಮಗಳೊಂದಿಗೆ ಗಂಡನ ಸೇವೆ ಮಾಡುತ್ತ ಸುಖಿಸಬೇಕೆಂದು ಅವಳ ಬಯಕೆ. ಆದರೆ ಗಂಡನು ಅವಿವೇಕಿ. ಮನೆಯಲ್ಲಿ ನಿತ್ಯ ಒಂದಿಲ್ಲೊಂದು ಮನಸ್ತಾಪ. ಹೆಂಡತಿಯ ಕೈಯಲ್ಲಿ

ನುರಿತವಳಾದುದರಿಂದ ಆಕೆಯು ತನ್ನ ದುಃಖವನ್ನು ನುಂಗಿಕೊಂಡು ನೆರೆಯುವರಿಗೂ ತನ್ನ ದುಃಸ್ಥಿತಿ ತಿಳಿಯದಂತೆ ನಡೆಯುವಳು. ತನ್ನ ದುಶ್ಚರಿತದ ಅರಿವು ನಮಗೆ ಆಗಬಾರದೆಂದು ಅಳಿಯನು ದಮ್ಮಿಯನ್ನು ನಮ್ಮೆಡೆಗೆ ಕಳುಹುತ್ತಲೆ ಇರಲಿಲ್ಲ. ಆದರೂ ಹೆಂಡತಿಯು ಆಗಾಗ್ಗೆ ಬೆಳಗಾವಿಗೆ ಹೋಗಿ ಮಗಳನ್ನು ಸಂತೈಸಿ ಧೈರ್ಯ ಕೊಟ್ಟು ಬರುವಳು.

ಒಂದು ದಿನ ಸಂಜೆಗೆ ಊಟ ತೀರಿಸಿಕೊಂಡು ಮಾತಾಡುತ್ತ ಕುಳಿತಿರುವಾಗ ತಂತಿಯ ಟಪಾಲದವನು ಮನೆಗೆ ಬಂದು ಟಪಾಲವನ್ನು ಕೊಟ್ಟನು. ನನ್ನ ಮೈ ಕಂಪಿಸತೊಡಗಿತು. ತಂತಿಯುವನೆಂದರೆ ಅವನು ಯಮದೂತನ ಅವತಾರವೆಂದೇ ನನ್ನ ಮನವರಿಕೆ. ಊರೊಳಗೆ ಯಾರಿಗಾದರು ತಂತಿ ಬಂದಿತೆಂದರೆ ಸತ್ತ ಸುದ್ದಿಯೆ ಬಂದಿತೆಂದು ನನ್ನ ವಿಶ್ವಾಸ. ಹಣಮನು ಗದ್ಗದ ಕಂಠದಿಂದ ದಮ್ಮಿಯ ಗಂಡನು ಸ್ವರ್ಗಸ್ಥನಾದನೆಂದು ಸುದ್ದಿ ಹೇಳಿದನು. ಅದನ್ನು ಕೇಳಿ 'ಅಯ್ಯೋ' ಎಂದು ಆಕ್ರೋಶಿಸಿ ನಾನು ಸ್ಮೃತಿದಪ್ಪಿ ಬಿದ್ದುಕೊಂಡೆನು. ನೆತ್ತಿಗೆ ನೀರು ಬಡಿದು ಹಣಮನು ನನ್ನನ್ನು ಹಿಡಿದುಕೊಂಡು ಕುಳಿತನು. ಹೆಂಡತಿಯು ಮೋರೆ ಮೋರೆ ಬಡಿದುಕೊಂಡು ನೆಲಕ್ಕೆ ತಲೆ ಘಟ್ಟಿಸಿ, 'ದಮ್ಮಾ ನಿನ್ನ ಕುಂಕುಮ ಅಳಿಸಿತಲ್ಲ! ನಿನ್ನ ಮಂಗಳಸೂತ್ರ ಮರೆಯಾಯಿತಲ್ಲ! ನೀನು ಏನೂ ಕಾಣಲಿಲ್ಲ. ನೀನು ಮಗನನ್ನು ಹಡೆದು, ನಿನ್ನ ತೊಟ್ಟಿಲಬಟ್ಟಲವನ್ನು ಕಳಿಸಬೇಕೆಂಬ ಬಯಕೆಯು ಬಯಲಾಯಿತಲ್ಲ. ಕಣ್ಣೀರೊಂದಿಗೆ ನಿನ್ನ ಊಟ ತಪ್ಪಲಿಲ್ಲ, ಉಡುಗೆ ತಪ್ಪಲಿಲ್ಲ. ಮಗಳ ಮದುವೆಯನ್ನು ಕಾಣಲಿಲ್ಲ!' ಎಂದು ಬಗೆಬಗೆಯಾಗಿ ಹಾಡಿ ಹಾಡಿ ಅಳತೊಡಗಿದಳು. ನಾನು, 'ಮಗಳೆ, ಸಾವಿತ್ರಿಯಂತಹ ಪತಿವ್ರತೆಯಾದ ನಿನಗೆ ವೈಧವ್ಯವೇ? ನಿನ್ನ ವೈಧವ್ಯದ ಗೋಳನ್ನು ಏನೆಂದು ಸೈರಿಸಲಿ! ಉಂಡುಡುವ ಮಗಳ ವೈಧವ್ಯದ ದಾರುಣ ದೆಸೆಯನ್ನು ಈ ಕಣ್ಣುಗಳಿಂದ ಹೇಗೆ ನೋಡಲಿ. ಸ್ವಾಮಿಾ, ನರಸಿಂಹಾ, ನನ್ನ ಕಣ್ಣನ್ನೇನೆಂದು ಮುಚ್ಚುವುದಿಲ್ಲ' ದೇವರೇ, ಆಯುಷ್ಯ

ಕೊಂಡು ತಿನ್ನುವ ಕೋಳಿಯ ಕಾಲು ಮುರಿದೆಯಲ್ಲ!' ಎಂದು ಎದೆ ಎದೆ ಬಡೆದುಕೊಂಡು ವಿಲಪಿಸತೊಡಗಿದೆನು. ಮನೆದುಂಬ ಅಳುವಿನ ಕೋಲಾಹಲವೆದ್ದಿತು. ನೆರೆಯವರು ಬಂದು ನನಗೆ ಸಮಾಧಾನ ಹೇಳಲನುವಾದರು, 'ಮಗಳು ಒಬ್ಬಳೇ ದುಃಖದಿಂದ ಹೌಹಾರಿ ಕುಳಿತಿರುವಳು. ಯಾರಾದರೂ ಹೋಗಿ ಅವಳನ್ನು ಮೊದಲು ಕರೆದುಕೊಂಡು ಬನ್ನಿರಿ. ಅಳುವುದು ನಿಮ್ಮ ಪಾಲಿಗೆ ಬಂದು ಬಿಟ್ಟದೆ.' ನಾನೇ ಬೆಳಗಾವಿಗೆ ಹೊರಡಬೇಕೆನ್ನುವಷ್ಟರಲ್ಲಿ, ಅವರು, 'ನೀವು ಹೋಗಬೇಡಿರಿ' ಎಂದುದರಿಂದ ಹೆಂಡತಿ ಭೀಮುರು ಹೋಗಿ ಮಗಳನ್ನು ಮರುದಿವಸ ರಾತ್ರಿ ಕರೆದುಕೊಂಡು ಬಂದರು ಮಗಳು ಮೊಮ್ಮಗಳನ್ನು ಅಪ್ಪಿಕೊಂಡು ಅಳುವ ನನಗೆ ಮತ್ತೆ ಸ್ಮೃತಿ ತಪ್ಪಿತು. ಹೃದಯದಿಂದ ಹೊರಚೆಲ್ಲುವ ದುಃಖವನ್ನು ಕೊನೆಣಿಸಿ ಉಳಿದುದನ್ನು ಹೊಟ್ಟೆಯಲ್ಲಿಯೆ ಕುದಿಯಲಿಕ್ಕೆ ಇಟ್ಟುಕೊಂಡೆವು. ಅಳಿಯನ ಔರ್ಧ್ವದೈಹಿಕ ವಿಧಿಯು ಹತಭಾಗ್ಯನಾದ ನನ್ನಿಂದಲೇ ಅಶ್ರುಧಾರಾಪೂರ್ವಕವಾಗಿ ಮುಗಿಯಿತು.

ಕಾಲಾವಧಿಯ ಮೂಲಕ ಕೊರಸಿಯೂ ಮೊಂಡಾಗುವುದುಂಟು. ಮೋಹಜಾಲದ ಮಹಿಮೆಯನ್ನು ಎಷ್ಟೆಂದು ವರ್ಣಿಸಲಿ! ಪ್ರೀತಿಯ ಮಗಳು, ತಂದೆ ತಾಯಿ, ಅಣ್ಣತಮ್ಮಂದಿರು, ತಂಗಿ ಅತ್ತಿಗೆಯರ ಜೊತೆಯಲ್ಲಿ ದಮ್ಮಿಯು ದಿನವೊಂದಕ್ಕೆ ದುಃಖವನ್ನು ಮರೆಯತೊಡಗಿದಳು. ನಮ್ಮ ಕಾಲದ ವೈಧವ್ಯದ ಯಮಯಾತನೆಯ ಪರಿಚಯವು ಈಗಿನವರಿಗಿಲ್ಲ! ಅಂದಿನ ಭಯಾನಕ ವೈಧವ್ಯದ ದೃಶ್ಯವನ್ನು ನೆನೆದರೆ ನನ್ನಂತಹ ಕರ್ಮಠ ವೈದಿಕಮಾರ್ಗಾವಲಂಬಿಗೂ ಮೈದುಂಬ ಮುಳ್ಳೇಳುವುವು! ಪಮ್ಮಿ ಸೊಸೆಯಂದಿರೊಂದಿಗೆ ದಮ್ಮಿಯು ತನ್ನ ಮಗಳನ್ನು ಅಕ್ಕರತೆಯಿಂದ ಸಿಂಗರಿಸಿ ಸಂಜೆಗೆ ತಿರುಗಾಡಲಿಕ್ಕೆ ಹೋಗುವಳು. ದಮ್ಮಿಪಮ್ಮಿಯರ ಮನರಂಜನೆಗಾಗಿ ಹಣಮನು ತಂದುಕೊಟ್ಟ ರಾಗದ ಪೆಟ್ಟಿಗೆಯನ್ನು ಅವರಿಬ್ಬರೂ ಹಾಡಿ ಬಾರಿಸುವರು ಭೀಮನು ಬಗೆಬಗೆಯ ಬಣ್ಣದ ಹೊಸ ಮಾದರಿಯ ಪೋಲಕ ಜಂಪರುಗಳನ್ನು ಹೊಲಿದು ತಂದು ಅತ್ತಿಗೆ ಅಕ್ಕತಂಗೆಂದಿರಿಗೆ ಕೊಡುವನು. ದಮ್ಮಿಗೆ

ತಾರತಮ್ಯದ ಗಾಳಿಯು ಸುಳುವೂ ಹತ್ತಬಾರದೆಂಬ ದಕ್ಷತೆಯಿಂದ ತರ ತರದ ಹೊಸ ಪತ್ತಲಗಳನ್ನು ತಂದು, ಹಣವನ್ನು, ತಂಗೆಂದಿರಿಗೆ ಅರ್ಪಿಸಿ ಕಣ್ಣುಕಿಸುರಾಗದಂತೆ ತನ್ನ ಹೆಂಡತಿಗೂ ಕೊಡುವನು. ದಮ್ಮಿಯು ಮಡಿಯ ಮಾತು ಹಣವು ಭೀಮರ ಮುಂದೆ ತೆಗೆಯುವು ದೆಂದರೆ ಭೀತಿ. ಹೆಂಡತಿಯು ಮುಂದೆ ರಹಸ್ಯವಾಗಿ ಆ ಮಾತನ್ನೆತ್ತಿದರೆ ಅವಳು ಅದಕ್ಕೆ ಮರೆಹಾಕಿ ಮತ್ತೊಂದು ಮಾತನ್ನೇ ಎತ್ತುವಳು. ಅವರವರ ಪಾಪ ಅವರವರ ಪಾಲಿಗೆ ಎಂದು ಆ ವಿಷಯವನ್ನೇ ಬಿಟ್ಟು ಕೊಟ್ಟನು

## ೩ ಪಿತಾಪುತ್ರವಾಗ್ಯುದ್ಧ

ಈ ಸಂಸಾರವು ಒಂದು ನಾಟಕ; ನವರಸಗಳ ಸಮ್ಮೇಳನ; ವಿವಿಧ ರುಚಿಯ ಸಮಾರಾಧನೆ. ಆಬಾಲವೃದ್ಧರಾದ ಜೀವರು ತಂತಮ್ಮ ಗುಣಕರ್ಮಾನುಸಾರವಾಗಿ ಒಂದರೆಕ್ಷಣ ರಂಗದಲ್ಲಿ ಕುಣಿದು ಕೂಗಿ ಯಮಸದನವೆಂಬ ಪರದೆಯ ಹಿಂದೆ ಸಪ್ಪಿಲ್ಲದೆ ಕಣ್ಮರೆಯಾಗಿ ಹೋಗುವರು !

ದಮ್ಮಿಯು ದುರ್ದೈವದಿಂದ ದುಃಖಿತರಾಗಿದ್ದರೂ ಭೀಮನ ಮದು ವೆಯನ್ನು ವಿಚಾರಿಸತೊಡಗಿದೆವು. ಭೀಮನು ಹೊಲಿಗೆಯ ಯಂತ್ರ ವನ್ನಿಟ್ಟು ಸ್ವತಂತ್ರವಾಗಿ ದುಡಿಯಹತ್ತಿದನು. ಅವನಿಗೆ ನಮ್ಮ ನಾಡಿನ ಕನ್ಯೆಯೊಂದನ್ನು ಗಂಟುಹಾಕಬೇಕೆಂದು ನನ್ನ ವಿಚಾರ.

ನಾರಾಯಣನು ಎರಡು ಮೂರು ವರ್ಷಗಳನಂತರ ಧಾರ ವಾಡಕ್ಕೆ ಬಂದನು. ಅವನನ್ನು ಕಂಡು ಮನೆಯವರಿಗೆಲ್ಲ ಆನಂದ ವಾಯಿತು. ಸಂಜೆಗೆ ಹಪ್ಪಳ ಸಂಡಿಗೆ ಬುರುಬುರಿಗಳ ಯಥೇಚ್ಛ ಭೋಜನವಾಗಿ ಹರಟೆಗೆ ಕುಳಿತೆವು. ಕ್ಷೇಮಕುಶಲಿಯ ಸುಷ್ಟಿಸಂಗತಿಗಳಾದ ಬಳಿಕ ಹರಟೆಯ ಮಾತುಗಳು ಭೀಮನ ಲಗ್ನದ ಕಡೆಗೆ ಹೊರಳಿದುವು. ನಾನು 'ನಾರಾಯಣಾ, ಭೀಮನಿಗೆ ನಮ್ಮ ದೇಶದ ಕನ್ಯೆಯನ್ನು ಗೊತ್ತು ಪಡಿಸಬೇಕೆಂದು ವಿಚಾರಿಸಿದ್ದೇನೆ. ಸಂಭಾವಿತರ ಕನ್ಯೆ ಬಂದರೆ ಮದುವೆ ಮಾಡಿಬಿಡುವಾ,' ಎಂದೆನು.

ನಾರಾ— ಶೂರ್ಪಾಲಿಯಲ್ಲಿ ಕನ್ಯೆಗಳಿಗೇನು ಕಡಿಮೆ? ನನ್ನ ಸೋದರ ಸೊಸೆಯು ದೊಡ್ಡವಳಾಗಿದ್ದಾಳೆ. ಒಬ್ಬಳೇ ಮಗಳು. ಕೊಡು ಕೊಳ್ಳುವುದರಲ್ಲಿ ಮಾಡಮುಟ್ಟುವುದರಲ್ಲಿ ತಂದೆ ತಾಯಿಗಳಿಬ್ಬರೂ ಉಮೇದಿನವರು. ಬೇಕಾದರೆ ಕನ್ಯೆಯನ್ನು ನಾನೇ ತಂದು ತೋರಿಸುವೆನು.

ಹೆಂ— ನೀವನ್ನುವ ಕನ್ಯೆ ಅಕ್ಷಂತಿಯ ಅನಂತಾಚಾರ್ಯರ ಮಗಳಲ್ಲವೆ? ಯಮುನಾಬಾಯಿಯು ಉಮೇದಿನ ಹೆಣ್ಣುಮಗಳು. ನನಗೆ ಗೊತ್ತಿದೆ.

ನಾನು— ಗಂಡ ಹೆಂಡರೀರ್ವರೂ ಕೃಷ್ಣವರ್ಣದವರಿರುವುದರಿಂದ ಹುಡುಗೆ ಕಪ್ಪಾಗಿರಬಹುದು.

ನಾರಾ— ಅಹುದು, ಅನಂತಾಚಾರ್ಯರ ಮಗಳು ಸಾದಗಪ್ಪಾಗಿದ್ದಾಳೆ. ಆದರೆ ಮನೆಗೆಲಸದಲ್ಲಿ ಗಟ್ಟಿಗಳು. ಮಡಿಮೈಲಿಗೆ ಮೊದಲಾದುವುಗಳಲ್ಲಿ ಯಮುನಕ್ಕನ ಕೈಯಲ್ಲಿ ನುರಿತವಳು. ಓದುಬರೆಯಲಿಕ್ಕೂ ಬರುತ್ತದೆ.

ಹೆ—ಬಿಳಿ ಬಣ್ಣದ ಭದ್ರೆಯನ್ನು ಮಗನಿಗೆ ಮಾಡಿಕೊಂಡು ಬಡುವ ಬವಣೆಯು ಸಾಕಾಗಿಲ್ಲವೆ? ಬಣ್ಣವನ್ನೇನು ತೊಳೆದು ಕುಡಿಯುವುದಿದೆಯೆ? ಕಣ್ಣು ಮೂಗಿನಿಂದ ಚೆನ್ನಾಗಿದ್ದು, ಅತ್ತೆಮಾವಂದಿರ ಮಾತು ಕೇಳುವವಳಿದ್ದರೆ ಸಾಕು.

ಭೀಮ—ಅಪ್ಪಾ, ನನ್ನ ಮದುವೆಯ ವಿಚಾರ ನಿಮಗೇಕೆ. ಈಗ ತಾನೆ ನನ್ನ ಪೂರ್ತಿ ಹಣಗಳಿಸಹತ್ತಿದ್ದೇನೆ. ಮದುವೆ ಮಾಡಿಕೊಂಡು ಹೆಂಡತಿಯ ಭಾರ ನಿಮ್ಮ ಮೇಲೆ ಹಾಕುವುದು ನನ್ನ ಮನಸ್ಸಿಗೆ ಬರುವುದಿಲ್ಲ.

ಹೆ—ಭೀಮಾ ಸುಮ್ಮನಿರು. ನಿನಗೇನು ತಿಳಿಯುತ್ತದೆ? ಹೆಣ್ಣು ಬರುವುದು ಒಂದು ಕಾಲವಿರುತ್ತದೆ. ಆ ಕಾಲ ಮೀರಿತೆಂದರೆ, ವರನ ವಿಷಯದಲ್ಲಿ ಒಂದೊಂದು ಕಲ್ಪನೆ ಮಾಡಿಕೊಂಡು ಕನ್ಯೆಯಿದ್ದವರು ತಿರುಗಿ ಹೋಗುವರು. ಆ ಮೇಲೆ ' ನಿಮ್ಮ ಕನ್ಯೆ ಕೊಡಿರಿ, ಅವರ ಕನ್ಯೆ

ಕೊಡಿಸಿರಿ ’ ಎಂದು ಹಲ್ಲಿಯಂತೆ ಪಕ ಪಕ ಬಾಯಿ ಬಿಡುತ್ತ ಹರಿದಾಡಬೇಕಾಗುತ್ತದೆ. ಭೀಮಾ ನಿನ್ನ ಹೆಂಡತಿಯ ಹೊಟ್ಟೆಯ ವಿಚಾರ ನಿನಗೇಕೆ ನಾವಿರುವಾಗ ?

ಭೀ—ನೀವೆಷ್ಟು ದಿವಸ ಪೂರೈಸುವುದು? ನನ್ನ ಕಾಲಮೇಲೆ ನಿಲ್ಲಲು ನಾನೇ ಗಟ್ಟಿಯಾಗಬೇಕು. ಮದುವೆ ಮಾಡಿಕೊಳ್ಳಬೇಕೆಂದೆನ್ನುವವನಿಗೆ ಮುಪ್ಪಾದರೂ ಕಾಲವು ಮೀರುವುದಿಲ್ಲ. ಹಣವಿದ್ದರೆ ಯಾವ ವಯಸ್ಸಿನಲ್ಲಿಯೂ ಹೆಣ್ಣು ತಂದು ಗಂಟು ಹಾಕುವರೆಂಬ ಉದಾಹರಣೆಗಳೆನ್ನೆಷ್ಟು ಕೊಡಲಿ ? ಆದುದರಿಂದ ನಾನು ಸ್ವಾವಲಂಬಿಯಾದ ಹೊರ್ತು ನನ್ನ ಮದುವೆಯ ಮಾತು ಎತ್ತುವ ಕಾರಣವಿಲ್ಲ.

ಆ ಮಾತು ಕೇಳಿ, ‘ ಭೀಮಾ ನಿನ್ನ ಲಗ್ನದ ಮಾತು ಇನ್ನು ಮುಂದೆ ತೆಗೆದರೆ ನನಗೆ ಬೇಕಾದ ದಂಡವನ್ನು ಕಟ್ಟು; ಸದ್ಯದಲ್ಲಿ ಆ ಮಾತು ತೆಗೆದುದು ಸರ್ವಥಾ ಅಪರಾಧವಾಯಿತು; ಎಂದು ನುಡಿದು ’ ಗಲ್ಲ ಗಲ್ಲ ಬಡೆದುಕೊಂಡೆನು. ಹೆಂಡತಿಯೂ ಸಿಟ್ಟಿನಿಂದ ಒಳಗೆ ಹೋಗಿಬಿಟ್ಟಳು.

ನಾರಾಯಣನು ಊರೊಳಗೆಲ್ಲ ಪೇಶಾವರಿಗಾಗಿ ಅಡ್ಡಾಡಿ ಬಂದನು. ಊಟವಾಗಿ ವಾಮಕುಕ್ಷಿಯಾಯಿತು. ಬಳಿಕ ಅವನು, ‘ ಆಚಾರ್ಯರೆ, ನಿಮ್ಮ ದೈವ ತೆರೆದಿದೆ. ನಮ್ಮಂತಹ ಬಡವರ ಕನ್ಯೆ ನಿಮ್ಮ ಮನಸ್ಸಿಗೆ ಬರುವುದೆಂತು ? ನಿಮ್ಮ ಮಕ್ಕಳು ಸುಧಾರಿಸಿದವರು. ನಿಮ್ಮ ಬಾಲಸ್ನೇಹಿತನಾದುದರಿಂದ ಸಲುಗೆಯಿಂದ ನನ್ನ ಸೋದರ ಸೊಸೆಯನ್ನು ಮಾಡಿಕೊಳ್ಳಿರೆಂದು ಅಂದೆನು. ತಪ್ಪಾಯಿತು, ಕ್ಷಮಿಸಿರಿ. ಆಳುವವರ ಕಣ್ಣು ಒರಿಸಿದಂತೆ ನನ್ನ ಬೀಗತನದ ಮಾತು ತೆಗೆದು ಸಹಾನುಭೂತಿ ತೋರಿಸಿದಿರಿ. ಭೀಮನಿಗೆ ಕನ್ಯೆ ಗೊತ್ತಾಗಿದ್ದರೂ ಅದನ್ನು ಬಚ್ಚಿಟ್ಟು ನನಗೆ ಬಡವನೆಂದು ಅಣಕವಾಡುವಿರಾ ?

ನಾನು—ಬಾಲಸ್ನೇಹಿತನಾದ ನಿನ್ನಲ್ಲಿ ವಂಚನೆಯೆ ? ಭೀಮನಿಗೆ ಕನ್ಯೆ ಗೊತ್ತಾಗಿದೆಯೆಂದು ಎಲ್ಲಿಯ ಸುದ್ದಿ ತೆಗೆದೆ ? ಇನ್ನೂ ನನ್ನ ಮನಸ್ಸಿನಲಿ. ಅನಂತಾಚಾರ್ಯರ ಕನ್ಯೆಯನ್ನೇ ನಿಶ್ಚಯಿಸಬೇಕೆಂದಿದೆ. ಆದರೆ

ಭೀಮನು ತುಂಟನು. ಯಾರ ಮಾತನ್ನೂ ಕೇಳುವವನಲ್ಲ. ಸ್ವಲ್ಪ ದಿವಸ ತಡೆ. ಭೀಮನ ಮನವೊಲಿಸಿ ನಿನ್ನ ಸೋದರಸೊಸೆಯನ್ನೇ ಗೊತ್ತುಪಡಿಸುವಾ.

ನಾರಾ—ಆಚಾರ್ಯರೆ, ಭೀಮನ ಲಗ್ನದ ಮುಹೂರ್ತ ಸಹ ಗೊತ್ತಾಗಿ ಹೋಗಿದೆಯಂತೆ. ಊರೆಲ್ಲ ಡಂಗುರ ಹೊಡೆಯುತ್ತಿದೆ. ನನ್ನ ಮುಂದೆ ಮಾತ್ರ ನೀವು ಕಿವಿ ಮುಚ್ಚುವದು!

ನಾನು—ಭೀಮನ ಮದುವೆಯ ನಿಶ್ಚಯವೆ? ಮಂತ್ರಾಕ್ಷತೆಯ ಮುಹೂರ್ತ ಗೊತ್ತಾಗಿದೆಯೆ,? ನಾರಾಯಣಾ, ತ್ರಿಕರಣಪೂರ್ವಕ ವಾಗಿ ಹೇಳುತ್ತೇನೆ. ಅದು ನೀಲಿ ಕೆಟ್ಟ ಮಾತು!

ಅಷ್ಟರಲ್ಲಿ ಭೀಮನೇ ಮನೆಗೆ ಬಂದನು.

ನಾನು—ಭೀಮಾ ನಿನ್ನ ಮದುವೆ ಗೊತ್ತಾಗಿದೆಯಂತೆ. ಮಂತ್ರಾಕ್ಷತೆಯ ಮುಹೂರ್ತ ನಿಶ್ಚಿತವಾಗಿದೆಯಂತೆ. ಅದನ್ನು ಬಚ್ಚಿಟ್ಟು ನಾವು ನಾರಾಯಣನಿಗೆ ಅಣಕವಾಡುತ್ತಿರುವೆವಂತೆ. ಅದಕ್ಕೆ ನೀನೇ ಉತ್ತರ ಕೊಡು; ನಮಗೇನು ಆ ವಿಷಯದ ಪರಿಚಯ!

ಭೀ—ಅಕ್ಕಿಯ ಕಾಳಿನ ಕಾಲದಲ್ಲಿ ಹಿರಿಯರಾದ ನಿಮ್ಮೆಲ್ಲರನ್ನು ಕರೆದೊಯ್ಯದಿರುವೆನೆ? ಪ್ರೌಢರಾದ ವರ ಕನ್ಯೆಯರು ತಾವೇ ಗೊತ್ತು ಪಡಿಸಿ ಪ್ರೀತಿವಿವಾಹವನ್ನು ಮಾಡಿಕೊಳ್ಳುವ ಸಮಯದಲ್ಲಿ ಹಿರಿಯರಿಗೆ ಮಂತ್ರಾಕ್ಷತೆ ಹಾಕಿ ಆಶೀರ್ವದಿಸುವುದೊಂದೇ ಕೆಲಸ.

ನಾರಾ—ಕೇಳಿದಿರಾ. ಭೀಮನು ಹಾರಿಸಿ ಹಾರಿಸಿ ಮಾತಾಡುತ್ತಿದ್ದಾನೆ.

ನಾನು—ಭೀಮಾ, ಸ್ಪಷ್ಟವಾಗಿ ಹೇಳು. ಈ ಸುದ್ದಿ ನಿಜವೋ? ಸುಳ್ಳೋ?

ಭೀ—ಸುದ್ದಿ ನಿಜವಿದೆ.

ನಾನು—ನೀನೇ ಮದುವೆ ಗೊತ್ತು ಮಾಡಲಿಕ್ಕೆ ನಾವೇನು ಸತ್ತಿರುವೆವೋ? ಮಂತ್ರಾಕ್ಷತೆಗೆ ನಮ್ಮನ್ನೊಯ್ದು ನೆರೆದ ಜನರಿಗೆ ಇವರೇ

ಮಾತಾಪಿತೃಗಳೆಂಬ ಬೊಂಬೆಗಳೆಂದು ಬೊಟ್ಟುಮಾಡಿ ತೋರಿಸ ಬೇಕೆಂದಿರುವೆಯಾ? ಹೇಳು ಯಾರ ಕನ್ಯೆ ಗೊತ್ತಾಗಿದೆ? ಅವಳು ನಮ್ಮ ಮನಸ್ಸಿಗೆ ಒರದಿದ್ದರೆ ನಮ್ಮ ಮಾತು ಮೀರಿ ಮದುವೆಯಾಗು ವೆಯಾ?

ಭೀಮನು ಮೋರೆ ಕೆಳಗೆ ಮಾಡಿ ಉತ್ತರಕೊಡದೆ ಸುಮ್ಮನೆ ನಿಂತನು.

ಹೆಂಡತಿಯು—ಭೀಮಾ, ವರದಕ್ಷಿಣೆ ಚೆನ್ನಾಗಿ ಗೊತ್ತು ಮಾಡಿ ರುವೆಯಾ? ಕನ್ಯೆ ನಮ್ಮ ಮಾತು ನಡಿಸುವಂಥವಳಿರುವಳೇನು? ಅವಳ ಮನೆಯುವರು ಮಾಡಮುಟ್ಟುವವರಿದ್ದಾರೆಯೆ? ನಡೆ, ಅವರ ಮನೆಗೆ ಹೋಗಿ ನಿಶ್ಚಯ ಮಾಡಿಕೊಂಡು ಬರುವೆವು. ಮುಹೂರ್ತ ಗೊತ್ತಾ ಗಿದ್ದರೆ ದಿವಸೆರಡು ದಿವಸಗಳಲ್ಲಿ ಸಾಮಾನ ಸಿದ್ಧಪಡಿಸುವೆವು.

ಭೀ—ಅವ್ವಾ, ನಿಮಗೆ ಆ ಕನ್ಯೆ ಮನಸ್ಸಿಗೆ ಬರುವಂತಿಲ್ಲ. ನನ್ನ ವಿವಾಹಕ್ಕೆ ನೀವು ಒಂದೂ ಕಾಸು ಖರ್ಚು ಮಾಡುವ ಕಾರಣವಿಲ್ಲ. ನಾನು ಪ್ರೀತಿಯ ಬಲವಾದ ಪಾಶದಲ್ಲಿ ಶಿಲುಕಿ ಈ ಪ್ರೇಮವಿವಾಹ ವನ್ನು ಮಾಡಿಕೊಳ್ಳುತ್ತಿರುವೆನು.

ನಾನು—ಕನ್ಯೆ ನಮ್ಮ ಮನಸ್ಸಿಗೆ ಬಾರದ ಹಾಗಿದ್ದರೆ ಅವಳೇನು ಹೊಲೆಯರ ಕನ್ಯೆಯೋ?

ನಾರಾ—ಕನ್ಯೆ ಕರ್ಹಾಡೆಯುವರವಳಂತೆ. ತಾಯಿ ಮಾಸ್ತರಿತಿ ಯಿರುವಳಂತೆ! ಇನ್ನೂ ಸಕೇಶಿಯಾಗಿರುವಳಂತೆ!

ಭೀ—ಅಹುದು. ಒಬ್ಬಳೇ ಮಗಳು, ಸುಶಿಕ್ಷಿತಳು, ಸುಂದರಳು.

ನಾನು—ಎಲಾ ಮೂರ್ಖಾ, ಕರ್ಹಾಟ ಕುಲದ ಸಕೇಶಿ ಮಾಸ್ತ ರಿತಿಯ ಮಗಳನ್ನು ಮದುವೆಯಾಗಿ ಋಷಿಕುಲವಂತಹ ಶೂರ್ಪಾಲಿಯ ಆಚಾರ್ಯರ ಕುಟುಂಬವನ್ನು ನರಕಕ್ಕೆಳೆಯುವೆಯಾ! ಕುಲಗೇಡಿಯೇ, ಪಂಕ್ತಿಗೆ ಕುಳಿತು ಭೋಜನ ಮಾಡಲಿಕ್ಕೂ ಅನರ್ಹರಾದವರ ಕನ್ನಿಕೆ ಯನ್ನು ಪಾಣಿಗ್ರಹಣ ಮಾಡಿ ಆಚಾರವಂತರ ಮನೆತನವನ್ನು ಕುಲ ಗೆಡಿಸುವೆಯಾ! ಧರ್ಮಲಂಡನೇ, ನನ್ನೀ ಅಧಃಪಾತವನ್ನು ಶೂರ್ಪಾಲಿ

ಯಲ್ಲಿ ಕಟ್ಟೆಯ ಮೇಲೆ ಕುಳಿತು ಕೆಲೆಯುವುದನ್ನು ಈ ಕಿವಿಗಳಿಂದ ಹೇಗೆ ಕೇಳಲಿ? ಮಾಧ್ವಸಮಾಜದಲ್ಲಿ ಮೇಲ್ಮೆಯಿಂದ ಮೆರೆದ ಶೂರ್ಪಾಲಿಯ ಅಶ್ವತ್ಥಾಚಾರ್ಯರ ಅವದಾತ ಯಶಸ್ಸಿಗೆ ನನ್ನ ಮಗನು ಕಲಂಕವನ್ನು ಹಚ್ಚಿದನೆಂಬ ಅವಹೇಲನೆಯನ್ನು ಹೇಗೆ ಸಹಿಸಲಿ? ಭೀಮಾ, ಕುಲಾಂಗಾರನೇ, ಈ ನರ-ಸಿಂಹನ ಹೊಟ್ಟೆಯಲ್ಲಿ ಹಂದೆಯಾಗಿ ಹುಟ್ಟಿದೆಯಲ್ಲ!

ನಾರಾ—ಭೀಮಾ, ಮುದುಕರಿಗೆ ಹಿಂಸೆಪಡಿಸಬೇಡ. ನನ್ನ ಸೋದರ ಸೊಸೆಯನ್ನು ನೀನು ಮದುವೆ ಮಾಡಿಕೊಳ್ಳಬೇಡ. ನಿನಗೂ ಅವರಿಗೂ ಸಲುವಳಿಯಾಗುವ ಕನ್ಯೆಯನ್ನು ಲಗ್ನವಾಗು.

ಭೀ—ಪ್ರೇಮವಿವಾಹದಲ್ಲಿ ನೀವು ವ್ಯತ್ಯಯ ತರಬೇಡಿ. ಬೇಕಾದರೆ ನಾನೇ ಮನೆಯನ್ನು ಬಿಟ್ಟು ಹೋಗುವೆನು. ನಿಮ್ಮ ಆಶೀರ್ವಾದವಿದ್ದರೆ ಸಾಕು.

ನಾನು—ನಿನ್ನೀ ಅಧರ್ಮ ಸಂಬಂಧಕ್ಕೆ ನಮ್ಮ ಆಶೀರ್ವಾದವೇ? ಮೂಢಾ, ವಿವಾಹದಲ್ಲಿ ಪ್ರೇಮವೆಂತಹದು? ನಾರಾಯಣಾ, ನೀನೇ ಹೇಳು. ನನ್ನ ವಿವಾಹದ ಪೂರ್ವದಲ್ಲಿ ನಾನು ಕನ್ಯೆಯನ್ನು ನೋಡಿದ್ದೆನೇ? (ಹೆಂಡತಿಯ ಕಡೆಗೆ ನೋಡಿ) ನೀನು ಹೇಳು? ನನ್ನ ಸಂಸಾರದಲ್ಲಿ ನ್ಯೂನತೆಯೇನಿದೆ? ಮಕ್ಕಳ ಹಿತದ ವಿಷಯದಲ್ಲಿ ದಕ್ಷರಾದ ತಾಯಿತಂದೆಗಳು ತಂದುಕೊಟ್ಟ ಹೆಂಡತಿಯೊಡನೆ ಸುಖದಿಂದ ಸಂಸಾರ ಸಾಗಿಸಿದರಾಯಿತು ಆ ಮೇಲೆ ಪ್ರೇಮದ ಬಳ್ಳಿಯು ಮೊಳೆತು, ದಾಂಗುಡಿವಿಡಿದು ಬೆಳೆದು, ಪೂತು, ಕಾತು, ಪಣ್ತು, ಕಣ್ಣುಗಳಿಗೆ ಅಂದವಾಗಿ ಸೊಗಯಿಸುವುದು! ಇಂತಹ ವಿವಾಹದಲ್ಲೇನಿದೆ? ಮದುವೆಗಿಂತ ಮೊದಲು ಪ್ರೇಮದ ಪಾಶ, ಮದುವೆಯಾದ ಮೇಲೆ ಗಂಟಲಿಗೆ ಬೆರಳುಗಳ ಪಾಶ. ಎಲಾ, ನೀನು ಬ್ರಹ್ಮಚಾರಿಯಾಗಿರುವೆ. ನಿನ್ನ ಸ್ನಾತಕ ವಿಧಿಯಾಗಿರುವುದಿಲ್ಲ. ಮೂಢಾ, ಅದಕ್ಕೂ ಮೊದಲು ಪ್ರೇಮದ ಮಾತನ್ನೆತ್ತುತ್ತಿರುವೆಯಲ್ಲ!

ಭೀ—ಪ್ರೇಮವಿವಾಹದ ಮಾತು ನಿಮಗೇನು ಗೊತ್ತು? ಅದರ ಜಾಲದಲ್ಲಿ ಸಿಕ್ಕವರಿಗಷ್ಟೇ ಅದು ಗೊತ್ತು. ನಿಮ್ಮ ವಿವಾಹಗಳು ಪ್ರೇಮದ ಪರಿಚಯವಿಲ್ಲದಾಗಲೆ ಆಗಿ ಹೋದುವು. ಪ್ರೇಮದ ಪಾಶವನ್ನು ಬಿಡಿಸುವುದು ಸಾಕ್ಷಾತ್ ಬ್ರಹ್ಮನಿಗೂ ದುಸ್ತರ!

ನಾನು—ಎಲೈ ಪಾಷಂಡಿಯೇ, ಹೆದ್ದೈವನ ಹೊಕ್ಕುಳ ಹೂವಿನಲ್ಲಿ ಹುಟ್ಟಿ, ಓದು ಉಸಿರಿ, ಈರೇಳು ಭುವನಗಳನ್ನು ಸೃಜಿಸಿದ ಸರಸ್ವತಿಯ ಗಂಡನಾದ ಪೊಂಬಸಿರಿನ ನಾಲ್ಮೊಗದ ಅಂಚೆದೇರನಿಗೆ ಪ್ರೇಮದ ಗಂಟಿನ ತೊಡಕು ಬಿಡಿಸುವುದು ಅಸದಳವೇ? ಭಗವಂತನನ್ನುಳಿದು ಜಗನ್ಮಾತೆಯನ್ನು ಬಿಟ್ಟರೆ ಬ್ರಹ್ಮನಂತಹ ಬಲಾಢ್ಯ ದೇವರು ಮತ್ತಾರೂ ಇಲ್ಲ. ಮೂಢಾ, ವಾಯುದೇವರಂತಹರು ಬ್ರಹ್ಮನ ಪಟ್ಟವನ್ನು ಆಕಾಂಕ್ಷಿಸುತ್ತ ಜಪಮಾಡುತ್ತ ಕುಳಿತಿರುವರು! ಮುಂಡೆಯಮಗನೇ, ಸಾಧಾರಣ ಕುಲಾಚಾರವನ್ನು ನಿರ್ವಹಿಸಲಾಗದ ನಿನ್ನಲ್ಲಿ ಬ್ರಹ್ಮನ ಶಕ್ತಿಯ ಮಾತೇಕೆ? ಮೂರ್ಖಾ, ಮಾತಿನಲ್ಲಿಯೂ ತಾರತಮ್ಯವಿರತಕ್ಕುದು. ತಾರತಮ್ಯಜ್ಞಾನವಿಲ್ಲದಿದ್ದರೆ ಮೋಕ್ಷವಿಲ್ಲ!

ಭೀ—ಕರ್ಹಾಡೆಯರ ಹೆಣ್ಣು ವೈಷ್ಣವರಿಗೆ ಮದುವೆ ಮಾಡಿಕೊಳ್ಳಲು ಅಡ್ಡಿಯಿಲ್ಲ. ಎಷ್ಟೋ ವೈಷ್ಣವರು ಕರ್ಹಾಡೆಯರ ಹೆಣ್ಣು ಮಾಡಿಕೊಂಡಿದ್ದಾರೆ. ಮೊದಲು ಕರ್ಹಾಡೆಯರಿದ್ದು ಆ ಬಳಿಕ ಸದ್ವೈಷ್ಣವರಾದ ಎಷ್ಟೋ ಮಾಧ್ವ ಕುಟುಂಬಗಳು ನಮ್ಮಲ್ಲಿವೆಯಂತೆ. ಆ ವಿಷಯನ್ನು ವಿಚಾರಿಸಿ ನಾನು ಈ ಮದುವೆಗೆ ಕೈಹಾಕಿದ್ದೇನೆ.

ನಾನುಃ—ಛೀ, ಬಿಡು ಮೂಢಾ, ನಿನ್ನ ಮಾತನ್ನು ಕೇಳಲಾರೆ. ನಿನ್ನ ಮುಖವೂ ನನಗೆ ಬೇಡ. ನನ್ನ ಮಾತನ್ನು ಕೇಳುವುದಿದ್ದರೆ ನಿನ್ನೀ ಲಗ್ನದ ಮಾತನ್ನು ಬಿಡು.

ಭೀ—ನಾನೇ ನಿಮಗೆ ಬೇಡವಾಗಿದ್ದರೆ, ಇದುವೇ ಕಡೆಯ ಭೆಟ್ಟಿ. ಎಂದು ನುಡಿದು ಭೀಮನು ಮನೆ ಬಿಟ್ಟು ಹೊರಟು ಹೋದನು.

ನಾನೂ ನಾರಾಯಣನೂ ಶಿಕ್ಷಕಿಯ ಮನೆಗೆ ಹೋಗಿ ಅವಳಿಗೆ ಮಗಳನ್ನು ಭೀಮನಿಗೆ ಕೊಡಬಾರದೆಂದು ಬೇಡಿಕೊಂಡೆವು. ಅವಳು,

'ದೇಶಸ್ಥರ ಮನೆಗೆ ಹೆಣ್ಣು ಕೊಡುವುದು ನನ್ನ ಮನಸ್ಸಿಗೆ ಸರ್ವಥಾ ಬರುವುದಿಲ್ಲ. ಆದರೆ ಮಾಡುವುದೇನು? ಇದ್ದ ಒಬ್ಬ ಮಗಳು; ಅವಳಿಗೆ ಹಿಂಸಿಸಬಾರದೆಂದು ಸುಮ್ಮನಿದ್ದೇನೆ' ಎಂದಳು. ಅವಳ ಮಗಳನ್ನು ಕಂಡಕೂಡಲೆ ಅವಳು, 'ಮದುವೆ ಮುರಿದರೆ ಜೀವವನ್ನೇ ಇಡುವುದಿಲ್ಲವೆಂದಳು. ಆ ವಿಷಯವನ್ನು ಹೆಚ್ಚಿಗೆ ಕಿಸುಕಿದರೆ ಸ್ತ್ರೀಹತ್ಯಾಪಾಪವು ದೊರೆಕೊಳುವುದೆಂದು ನಾವು ನಿರಾಶರಾಗಿ ಮನೆಗೆ ಮರಳಿ ಬಂದೆವು!

ಭೀಮನ ಮದುವೆಯಾಯಿತು. ಅದರ ಮರುದಿವಸ ಮುಂಜಾವಿನಲ್ಲಿ ಪುರಾಣದ ಓಲೆಗಳನ್ನು ತಿರುವುತ್ತ ಕುಳಿತಿರುವಾಗ ಮನೆಯ ಮುಂದಿನ ಬೀದಿಯಲ್ಲಿ ವರ್ತಮಾನಪತ್ರ ಮಾರುವವನು,

## ದೇಶಸ್ಥ–ಕರ್ಹಾಟಕ ವಿವಾಹ

### ಶೂರ್ಪಾಲಿಯ ಆಚಾರ್ಯರೊಡನೆ ಕರ್ಹಾಟಯುವತಿಯ ಲಗ್ನ

#### ಸದ್ಗೃಹಸ್ಥರ ಶುಭಾಶೀರ್ವಾದಗಳು.

ಎಂದು ಒದರುತ್ತ ಮನೆಯ ಕಡೆಗೆ ಬರುತ್ತಿರುವುದನ್ನು ನೋಡಿ ಬಾಗಿಲ ಹಾಕಿ ಕಿವಿ ಮುಚ್ಚಿಕೊಂಡು ಕುಳಿತೆನು. ಆದರೂ ಅವನು ಕಿಟಕಿಯೊಳಗಿಂದ ಎಂದಿನಂತೆ ಒಂದು ಪತ್ರಿಕೆಯನ್ನು ಒಗೆದು ಹೋದನು. ಹಣಮನು ನನ್ನ ಹತ್ತಿರದಲ್ಲಿ ನಿಂತಿದ್ದನು. ನಾನು ಅವನಿಗೆ, 'ಊರೂರಿಗೆ ಈ ಸುದ್ದಿ ಹರಡುವ ವೃತ್ತಪತ್ರಕಾರರಿಗೆ ನಾನೇನು ಮಾಡಿರುವೆನು? ಬೆಕ್ಕು ಕೊಂದಿರುವೆನೇ? ನನ್ನ ಗೃಹಕೃತ್ಯವನ್ನು ಬಯಲಿಗೆಳೆಯುವ ಈ ಉಪದ್ವ್ಯಾಪಿಗಳಿಗೇನೆನ್ನಬೇಕು? ಊರ ಸದ್ಗೃಹಸ್ಥರದೇನು ಗಂಟು ಹೋದುದು? ತಮ್ಮ ಮಕ್ಕಳು ಇಂತಹ ಹೊಲ್ಲದ ಕೆಲಸವನ್ನು ಕೈಕೊಂಡಿದ್ದರೆ ಅವರ ಕಿವಿ ಹಿಂಡಿ ಸುಮ್ಮಗೆ ಕೂಡ್ರಿಸುತ್ತಿದ್ದರು. ಹೆರವರನ್ನು ಮುಂದೆ ಮಾಡಿ, ಬಲಿ ಕೊಟ್ಟು, ತಾವು ಸಮಾಜಸುಧಾರಕರೆಂದು ಈ ದಂಭಾಚಾರಿಗಳು ಜಂಬಕೊಚ್ಚಿಕೊಳ್ಳುವರು! ಹಣಮಾ, ಇನ್ನೇನು ಗತಿ? ಬೀದಿಯಲ್ಲಿ

ಹೋಗುತ್ತಿರುವವರೆಲ್ಲ ನಮ್ಮ ಮನೆಯ ಕಡೆಗೆ ನೋಡಿ ನನ್ನನ್ನಾಡಿ ಕೊಳ್ಳುತ್ತಿರುವರಲ್ಲ? ಊರೊಳಗೆ ನರಸಿಂಹನ ಗುಡಿಯ ಕಟ್ಟೆಯ ಮೇಲೆ, ದತ್ತಾತ್ರೇಯನ ಅಂಗಳದಲ್ಲಿ ಜನರು ಗುಂಪುಗುಂಪಾಗಿ ಕಲೆತು ನನ್ನನ್ನು ಕುರಿತು ಸಂಜೆಗೆ ಕೆಲೆಯುತ್ತ ಕೂಡ್ರಬಹುದು. ಶೂರ್ಪಾಲಿಯಲ್ಲಂತೂ ನನ್ನ ಗತಿಯೇನು? ಹಣಮಾ, ಕಾಗೆಯನ್ನು ತಿಂದ ಹೊಲೆಯನಂತೆ ನನ್ನ ಸ್ಥಿತಿಯಾಗಿರುವುದು. ಈ ಸುಧಾರಣೆ ಬೇಡ; ಈ ಊರು ಬೇಡ; ಶೂರ್ಪಾಲಿ ಬೇಡ; ದೇಶಾಂತರ ಎದ್ದು ಹೋಗಬೇಕೆಂದು ಅನಿಸತೊಡಗಿದೆ!

ಹಣಮ—ನಿಮ್ಮಲ್ಲಿ ಧಾರ್ಮಿಕ ವಿಚಾರ ತೀಕ್ಷ್ಣವಾಗಿರುವುದರಿಂದ ಭೀಮನ ವಿವಾಹದ ವಿಷಯವು ದುಃಸಹವಾಗಿ ತೋರಹತ್ತಿದೆ. ತಾನು ಮಾಡಿದ ಪಾಪಕ್ಕೆ ಭೀಮನೆ ಹೊಣೆಗಾರ. ಅವನ ಪಾಪ ನಿಮಗೆ ತಟ್ಟುವಹಾಗಿಲ್ಲ. ಸುದ್ದಿಯನ್ನು ಹರಡುವುದು ಪತ್ರಕಾರರ ಉದ್ಯೋಗ. ಇಂತಹ ಸುದ್ದಿಗಳು ಸಿಕ್ಕಮೇಲೇನು ಕೇಳುವುದು? ಅಪ್ಪಾ, ನಿಮಗೊಂದು ಮಾತು ಹೇಳುವುದೆಂದರೆ, ಭೀಮನ ವಿವಾಹದ ಸಂಬಂಧವಾಗಿ ನೀವು ತಿಳಿದಂತೆ ಅವನು ಅಪರಾಧ ಮಾಡಿಲ್ಲವೆಂದು ಊರವರು ಅನ್ನುವುದುಂಟು. ದೇಶಾಂತರ ಎದ್ದು ಹೋಗುವ ಪ್ರಸಂಗ ಬಂದಿದೆಯೆಂದು ತಿಳಿದುಕೊಳ್ಳುವುದು ಯೋಗ್ಯವಲ್ಲ. ಕರ್ಹಾಡೆಯರೂ ನಮ್ಮಂತೆ ಷಟ್ಕರ್ಮಗಳ ಅಧಿಕಾರವುಳ್ಳ ಬ್ರಾಹ್ಮಣರು. ಅವರ ಸಂಗಡ ಆದ ಶರೀರಸಂಬಂಧದಿಂದ ದ್ವಿಜತ್ವವು ಕೆಡುವುದಿಲ್ಲವೆಂದು ಊರವರು ಅನ್ನುವರು. ಅದೇನೇ ಇರಲಿ. ಆದದ್ದು ಆಗಿಹೋಯಿತು. ಅದನ್ನೇ ನೆನೆಯುತ್ತ ವ್ಯರ್ಥ ಮನಸ್ತಾಪ ಮಾಡಿಕೊಳ್ಳಬೇಡಿರಿ.

ಎಂದು ನನಗೆ ಸಮಾಧಾನ ಹೇಳಿ ಹಣಮನು ಅಟ್ಟದ ಮೇಲೆ ಹೋದನು.

ಅಷ್ಟರೊಳಗೆ ಒಬ್ಬನು ಮೈಮೇಲೆ ಉದ್ದ ಬಿಳಿಯ ಸದರ, ಅದರ ಮೇಲೆ ಎದ್ದು ಕಾಣುವ ಕರಿಯ ಬಣ್ಣದ ಕಬಜೆ, ತಲೆಯ ಮೇಲೆ ಕೊಂಚ ಓರೆಯಾಗಿರಿಸಿದ ಬೆಳ್ಳಗಿನ ಟೊಪ್ಪಿಗೆ, ಕಾಸೆಕಟ್ಟಿ ಉಟ್ಟ

ಶುಭ್ರವಾದ ದೋತ್ರ, ಇವುಗಳನ್ನು ನೀಟಾಗಿ ಧರಿಸಿ ಕಾಲಲ್ಲಿ ತಿಳುವಾದ ಚಪ್ಪಲಿ ಮೆಟ್ಟಿ ನನ್ನ ಮನೆಯ ಬಾಗಿಲ ತೆಗೆದನು. ನಾನು ಅವನಿಗೆ ಆಸನವನ್ನು ತೋರಿಸಿದೆನು. ಅವನು ವೀರಾಸನ ಹಾಕಿ ಕುಳಿತು ಎದೆಗೆ ಚುಚ್ಚಿರುವ ಲೆಕ್ಕಣಿಕೆಯನ್ನು ತೆಗೆದು ನನಗೆ ಕೇಳಿದನು,

ಸುದ್ದಿಗಾರ—ಶೂರ್ಪಾಲಿಯ ಆಚಾರ್ಯರು ನೀವೆಯಲ್ಲವೆ ?

ನಾನು—ಅಹುದು. ತಾವಾರು ?

ಸು—ನಾನು ವರ್ತಮಾನಪತ್ರದ ಸುದ್ದಿಗಾರ.

ನಾ—ಈ ಸ್ಥಳ ಬಿಟ್ಟು ಮೊದಲು ಕದಲಿರಿ. ನಿಮ್ಮಂತಹ ಕುಚೋದ್ಯಗಾರರ ಸಂಬಂಧ ಬೇಡ !

ಸು—ಸ್ವಾಮಿಾ, ನಾನು ಕುಚೋದ್ಯಗಾರನಲ್ಲ. ವರ್ತಮಾನಪತ್ರಿಕೆಯ ಸುದ್ದಿಗಾರನು.

ನಾ—ಎರಡೂ ಒಂದೇ.

ಸು—ನಿಮ್ಮ ಸಂದರ್ಶನಕ್ಕೆ ಬಂದಿರುವೆನು. ನೀವು ಧೈರ್ಯಶಾಲಿಗಳು;

ನಾ—ಹುಂ, ಮುಂದೆ ?

ಸು—ಸಮಾಜಸುಧಾರಕರು. ನಿಮ್ಮ ಮಗನಿಗೆ ಕರ್ಹಾಡೆಯರ ಕನ್ಯೆ....

ನಾ—ನಿಮಗೇನು ಅರ್ಧಚಂದ್ರ ಬೇಕೋ ? ಸುಮ್ಮನೆ ಎದ್ದು ಹೋಗುವಿರೋ ? ಎಂದು ನಡಿದು ಎದ್ದ ಕೂಡಲೆ, ಸುದ್ದಿಗಾರನು ಕಾಲಿಗೆ ಬುದ್ಧಿ ಹೇಳಿದನು !

# ಕರ್ಮಯೋಗ

## ೧ ಪದ್ಮಾವತೀ ಶ್ರೀನಿವಾಸಕಲ್ಯಾಣ

'ಜಗತ್' ಶಬ್ದದಿಂದ ಅಸ್ಥಿರತೆಯು ಧ್ವನಿತವಾಗುವುದು. ಈ ತಿರೆಯಲ್ಲಿ ಆವುದೂ ಸ್ಥಿರವಾದುದಿಲ್ಲ. ಅನಾದಿ ಕಾಲದಿಂದ ಉಗಮವಾದ ಮಾನವಸಮಾಜದ ಪ್ರವಾಹವು ಮಾರ್ಪಡುತ್ತ ಇಂದಿನವರೆಗೆ ಹರಿಯುತ್ತ ಬಂದಿದೆ. ಪ್ರಳಯದ ವರೆಗೂ ಅದು ಹಾಗೆಯೆ ಮಾರ್ಪಡುತ್ತ ಹರಿಯುವುದು ನಿಶ್ಚಿತ. ಈ ಪ್ರವಾಹದ ಪ್ರತೀಪವಾಗಿ ಈಜಬೇಕೆಂಬ ಮಾನವನು ಲಹರಿಯಲ್ಲಿಯೆ ತನಗರಿಯದೆ ಹರಿದು ಹೋಗುವುದುಂಟು. ಸನಾತನಧರ್ಮವೊಂದೇ ಅಚಲವಾಗಿ ಗಟ್ಟಿಯಾಗಿ ನಿಂತಿರುವುದು. ನನ್ನ ಸಂಸಾರದ ಲಹರಿಯಲ್ಲಿ ನಾನೊಬ್ಬನೇ ಉಸುಕು ಕತ್ತರಿಸುತ್ತಿಪ್ಪರೂ ಕಾಲೂರಿ ಸನಾತನಧರ್ಮಕ್ಕೆ ಆಧಾರಭೂತನಾಗಿ ನೆಲೆನಿಂತಿರುವೆನು.

ಹರಿವಾಯುಗಳ ಅನುಗ್ರಹದಿಂದ ಹಣಮನ ಹೈಯರ ಪರೀಕ್ಷೆಯಿಳಿದು ಅವನಿಗೆ ಬೆಳಗಾವಿಯ ಕಮಿಶನರರ ಕಚೇರಿಗೆ ವರ್ಗವಾಯಿತು. ಬೆಳಗಾವಿಯಲ್ಲಿ ಶೂಪಾರ್ಲಿಯವರು ಬಹಳವಾಗಿರುವುದರಿಂದ ಅವರಿಗೆ ಮೋರೆ ತೋರಿಸಲಾರದೆ, ವಿಜಯನಗರದಲ್ಲಿ ಬಂಗ್ಲೆಯನ್ನು ಹಿಡಿದೆವು. ಎಲ್ಲಿ ಹೋದರೂ ಮುತ್ತಲ ಗಿಡಕ್ಕೆ ಮೂರೇ ಎಲೆಗಳು! ಧಾರವಾಡದಿಂದ ಬೆಳಗಾವಿಗೆ ಬಂದ ನನಗೆ ಹಂಚಿನ ಮೇಲಿಂದ ಒಲೆಯಲ್ಲಿಯೇ ಕಾಲಿಟ್ಟ ಹಾಗಾಯಿತು! ವಿಜಯನಗರವು ಸೊಗಸುಗಾರರ ತವರೂರು. ಮಹಿಳೆಯರ ಮೈಮೆವಡೆದ ಮಲೆಯಾಳ! ಹಣಗಳಿಸಿ ತರುವುದೊಂದೇ ಗಂಡಸರ ಕೆಲಸ. ಸಂತೆ ಪೇಟೆ ಮೊದಲಾದ ಕೆಲಸಗಳಲ್ಲಿ ಹೆಂಗುಸರ ಕಾರಭಾರವೇ ಕಾರಭಾರ. ಸಂಜೆಯಾದೊಡನೆ

ತರತರದ ಪತ್ತಲ ಉಟ್ಟು, ಹೂ ಮುಡಿದು ತಂಡತಂಡವಾಗಿ ತಿರುಗಾಡುವ ಹೆಂಗಸರನ್ನು ಕಂಡು ಗಂಡಸರೇ ಮೊಗತಿರುವಿ ಹೋಗುವುದು. ಅದನ್ನು ಕಂಡು ನನಗೆ, 'ಅವರು ರಾತ್ರೆ ಅಡುಗೆಯ ಕೆಲಸವನ್ನು ಮನೆಯ ಗಂಡಸರಿಗೆ ಒಪ್ಪಿಸಿರಬಹುದು, ಇಲ್ಲವೆ, ರಾತ್ರಿ ಅವರಿಗೆ "ರಾಯಪ್ಪ ನಾಯಕರ ಫಲಾಹಾರ" ಹಾಕುತ್ತಿರಬಹುದೆ' ಎಂದು ಅನಿಸುವುದು !

ನೆರೆಯಲ್ಲಿ ಗೋವಿಂದರಾಯರು ಇರುವರು. ಅವರ ವ್ಯವಸಾಯ ವಕೀಲಿ. ಅವರ ಹೆಂಡತಿ ತುಂಗಾಬಾಯಿಯವರಿಗೂ ನಮ್ಮ ಮನೆಯವರಿಗೂ ಪರಿಚಯ ಬಳೆಯಿತು. ಮೇಲಾಗಿ ಅವರ ಮಗಳು ಮಧುಮಾಲತಿಗೂ ಸಮವಯಸ್ಕಳಾದ ಪಮ್ಮಿಗೂ ಸ್ನೇಹವುಂಟಾಯಿತು. ಮಧುಮಾಲತಿಯು ಆಗಾಗ್ಗೆ ಪಮ್ಮಿಯನ್ನು ಕರೆದೊಯ್ದು ಪೆಟ್ಟಿಗೆಯ ಮೇಲೆ ಹಾಡಲಿಕ್ಕೂ ಬಾರಿಸಲಿಕ್ಕೂ ಹಚ್ಚುವಳು. ಪರರ ಮನೆಗೆ ಹೋಗಬಾರದೆಂದು ನಾನು ಆಗಾಗ್ಗೆ ಸಿಟ್ಟು ಮಾಡಿದರೂ ಹೆಂಡತಿಯ ಸಮ್ಮತಿಯಿಂದ ಪಮ್ಮಿಯು ಅವರ ಮನೆಗೆ ಹೋಗುವಳು. ಗೋವಿಂದರಾಯರೂ ಪಮ್ಮಿಯ ಪೆಟ್ಟಿಗೆಯ ಮೇಲಿನ ಕೈವಾಡು ಕಂಡು ಪ್ರಶಂಸಿಸುವರಂತೆ. ಒಮ್ಮೊಮ್ಮೆ ಪಮ್ಮಿ ಮಧುಮಾಲತಿಯರು ತುಂಗಾಬಾಯಿಯವರಿಗೆ ವೃತ್ತಪತ್ರ ಪುಸ್ತಕಗಳನ್ನು ಓದಿ ಹೇಳುವರು. ಸಂಜೆಯಾದೊಡನೆ ನಮ್ಮ ಮನೆಯವರೂ ಅವರೂ ತಿರುಗಾಡಲಿಕ್ಕೆ ಹೋಗುವರು.

ಒಮ್ಮೆ ಬಿಡುವಿನಲ್ಲಿ. ಗೋವಿಂದರಾಯರ ಮಗ ಶ್ರೀನಿವಾಸನು ಮುಂಬಯಿಯಿಂದ ಬಂದನು. ಅವನನ್ನು ನೋಡಿ, ಹೆಂಡತಿಯು, 'ಶ್ರೀನಿವಾಸನಿಗೆ ಪಮ್ಮಿಯನ್ನು ಕೇಳಬಾರದೆ'? ಎಂದಳು. 'ಛೀ ಹುಚ್ಚೀ, ಶ್ರೀನಿವಾಸನಿಗೆ ಮಗಳನ್ನು ಕೇಳಬೇಕಾದರೆ, ಕಡಿಮೆ ಪಕ್ಷಕ್ಕೆ ಎರಡು ಸಾವಿರ ವರದಕ್ಷಿಣೆ ಕೊಡಬೇಕು. ಇಷ್ಟಾದರೂ ಅವರು ನಮ್ಮ ಕನ್ಯೆ ಮಾಡಿಕೊಳ್ಳುವರೋ, ಇಲ್ಲವೋ, ಇದು ಸಂಶಯ. ವ್ಯರ್ಥ ಬಾಯಿಹಾಕಿ ಅಪಮಾನ ಮಾಡಿಕೊಳ್ಳುವುದರಲ್ಲಿ ಅರ್ಥವಿಲ್ಲ,' ಎಂದೆನು. ಹಣದ ಮಾತು ತೆಗೆದ ಕೂಡಲೆ ಹೆಂಡತಿಯು ನಿರುತ್ತರಳಾ

ದಳು. ಶ್ರೀನಿವಾಸನನ್ನು ನೋಡಿ ನನ್ನ ಬಾಯಿಗೂ ನೀರು ಬಿಟ್ಟಿದು ನಿಜ ಆದರೆ ಮಾಡುವುದೇನು ?

ಪದ್ಮಿಯು ಎಂದಿನಂತೆ ವಕೀಲರ ಮನೆಗೆ ಹೋಗಿ ಬರುವಳು. ಒಂದು ದಿನ ಸಂಜೆಗೆ ನಾನು ಬೇಸತ್ತು ಪಂಪಾಸರೋವರದ ಕಡೆಗೆ ತಿರುಗಾಡುತ್ತ ನಡೆದೆನು. ಅಲ್ಲಿ ನಾನು, ಪದ್ಮಿ ಮಧುಮಾಲತಿಯರು ಶ್ರೀನಿವಾಸನ ಸಂಗಡ ಮಾತಾಡುತ್ತ ಕುಳಿತಿರುವುದನ್ನು ಕಂಡು ತಪ್ತ ನಾಗಿ ಮನೆಗೆ ಬಂದು, 'ಪದ್ಮಾ, ಶ್ರೀನಿವಾಸನ ಸಂಗಡ ತಿರುಗಾಡ ಲಿಕ್ಕೆ ತಿಳಿಯುವುದಿಲ್ಲವೇ? ಎಂದೆನು. ಆಕೆಯು 'ಅಪ್ಪಾ ನಾನೂ ಮಧುಮಾಲತಿಯೂ ಆಡ್ಡಾಡಲಿಕ್ಕೆ ಹೋಗಿ, ಭಾವಿಯ ಕಟ್ಟೆಯಮೇಲೆ ಕುಳಿತಾಗ ಬಂದು ತಂಗಿಯೊಡನೆ ಮಾತಾಡುತ್ತ ಕುಳಿತರೆ, ನಾನೇನು ಒಬ್ಬಳೇ ಎದ್ದು ಬರಬೇಕೇ? ಮಧುಮಾಲತಿಯ ದಾರಿಯನ್ನು ನೋಡುತ್ತ ಕುಳಿತೆನು. ನನ್ನದೇನು ತಪ್ಪು ?' ಎಂದುದಕ್ಕೆ ನಿರುತ್ತರನಾದಗೂ, ಅವಳಿಗೆ ವಕೀಲರ ಮನೆಗೆ ಹೋಗಲಿಕ್ಕೆ ಕಟ್ಟುಮಾಡಿದೆನು.

ಪದ್ಮಿಯು ಮನೆಗೆ ಬರದೆಯಿದ್ದುದನ್ನು ಕಂಡು ತುಂಗಾಬಾಯಿ ಯವರು ಬಂದು, 'ಪದ್ಮೀ, ಎರಡು ದಿವಸ ಮನೆಗೇಕೆ ಬಂದಿಲ್ಲ? ನಡೆ, ನೀನೂ ಮಧುಮಾಲತಿಯೂ ಕೂಡಿ ಚಹ ಮಾಡಿರಿ; ಇಂದು ನಿಮ್ಮ ಕೈ ಚಹ ಕುಡಿಯಬೇಕೆಂದಿರುವೆ' ಎಂದು ಪದ್ಮಿಯನ್ನು ಕೈ ಹಿಡಿದು ಕರೆದುಕೊಂಡು ಹೋಗುವಾಗ ಅವಳು ನನ್ನ ಕಡೆಗೆ, ದೃಷ್ಟಿ ಯನ್ನೊಗೆದುದಕ್ಕೆ ನಾನು ಮೌನದ ಉತ್ತರವನ್ನಿತ್ತೆನು.

ಒಂದು ದಿನ ತುಂಗಾಬಾಯಿಯವರು ಊಟ ಉಡುಗೆ ತೀರಿಸಿ ಕೊಂಡು ಮನೆಗೆ ಹೆಂಡತಿಯೊಡನೆ ಮಾತಾಡಲಿಕ್ಕೆ ಬಂದು ನಡು ಮನೆಯಲ್ಲಿ ಕುಳಿತರು. ನಾನು ಮುಂಚೆಯ ಮನೆಯಲ್ಲಿ ಕುಳಿತಿದ್ದೆನು. ಅವರ ಮಾತುಕತೆಗಳು ನನಗೆ ಕೇಳುವಂತೆ ನಡೆದುವು.

ಹೆಂಡತಿ—ತುಂಗಾಬಾಯಿಯವರೆ, ನಿಮ್ಮ ಮಧುಮಾಲತಿಯು ದೊಡ್ಡವಳಾಗಿದ್ದಾಳೆ. ಅವಳ ಲಗ್ನದ ವಿಚಾರವನ್ನು ಮಾಡುತ್ತಿರ ಬೇಕಲ್ಲ ?

ತುಂಗಾಬಾಯಿ— ಈಗಿನ ಹೆಣ್ಣುಮಕ್ಕಳನ್ನೇನು ಕೇಳುವದು. ಅವಳು ಮ್ಯಾಟ್ರಿಕ್ ಪರೀಕ್ಷೆ ಪಾಸಾಗುವವರೆಗೆ ಮದುವೆ ಮಾಡಿಕೊಳ್ಳು ವುದಿಲ್ಲವೆಂದು ಖಂಡಿತವಾಗಿ ಹೇಳಿಬಿಟ್ಟಿದ್ದಾಳೆ. ವರ್ಷೆರಡುವರ್ಷ ಅವಳ ಲಗ್ನದ ಮಾತು ತೆಗೆಯುವಂತಿಲ್ಲ. ಸದ್ಯಕ್ಕೆ ಸೀನನ ಮದುವೆ ತೀರಿಸಬೇಕೆಂದಿದ್ದೇವೆ. ಕನ್ಯೆಗಳು ಬಂದು ಹೋಗಹತ್ತಿವೆ. ಅವನ ಮನಸ್ಸಿಗೆ ಬಂದ ಕನ್ಯೆ ಗೊತ್ತುಮಾಡುವುದು. ನಮ್ಮ ಕೈಯಲ್ಲೇನಿದೆ?

ಹೆಂ—ವರದಕ್ಷಿಣೆ ಚೆನ್ನಾಗಿ ಕೊಡುವವರು ಬೇಕು! ಅತ್ತೆಯ ಮನೆಯವರು ಮಾಡುಮುಟ್ಟುವವರು ಬೇಕು! ಮತ್ತೇನು? ಅದ ನ್ನೇಕೆ ಬಚ್ಚಿಡುವಿರಿ?

ತುಂ—ಹಣವೇನು ನಮ್ಮಲ್ಲಿ ಉಳಿಯುವುದೇ? ಕನ್ಯೆ ಸೀನನ ಮನಸ್ಸಿಗೆ ಬಂದರಾಯಿತು. ಮೇಲಾಗಿ ಸೀನನು ವರದಕ್ಷಿಣೆ ತೆಗೆದು ಕೊಳ್ಳಬಾರದೆಂದು ಗೊತ್ತುಮಾಡಿರುವನು.

ಹೆಂ—ಅಂದರೆ, ಬಡವರ ಕನ್ಯೆಯನ್ನೂ ಮಾಡಿಕೊಳ್ಳಲಿಕ್ಕೆ ಅಡ್ಡಿಯಿಲ್ಲವೆಂದೆನ್ನಿ?

ತುಂ—ಬೀಗರು ಉಂಡುಟ್ಟು ಸುಖದಿಂದಿದ್ದವರಾದರಾಯಿತು.

ಹೆಂ—ಸೀನಪ್ಪನಿಗೆ ಎಂತಹ ಕನ್ಯೆ ಬೇಕಂತೆ?

ತುಂ—ಅಂತೇ, ಕಲಿತವಳಿರಬೇಕಂತೆ. ಅವಳಿಗೆ ಹಾಡಲಿಕ್ಕೆ ಬಾರಿಸಲಿಕ್ಕೆ ಚಹಕಾಫಿ ಫಲಾಹಾರದ ಪದಾರ್ಥ ಮಾಡಲಿಕ್ಕೆ ಬರಬೇ ಕಂತೆ. ಕನ್ಯೆ ಸುದೃಢಳಾಗಿ ನಿಮ್ಮ ಮಗಳಂತೆ ಚೆಲುವೆಯಾಗಿರಬೇ ಕಂತೆ.

ಹೆಂ—ಅಂದರೆ ಪದ್ಮಿಯು ಸೀನಪ್ಪನ ಮನಸ್ಸಿಗೆ ಬಂದಿರುವ ಳೇನು?

ತುಂ—ನಾನೇನು ಅವನಿಗೆ ಕೇಳಿರುವುದಿಲ್ಲ. ನಿಮ್ಮ ಮಗಳ ಹಾಗೆ ಚೆಲುವೆಯಾಗಿರಬೇಕೆಂದು ನಾನಂದೆ. ಅವನೆನ್ನುವುದು ಕನ್ಯೆ ಚೆಲುವೆಯಾಗಿರಬೇಕಂತೆ.

ಈ ಮಾತು ಕೇಳಿ ಪದ್ಮಿಯನ್ನು ಶ್ರೀನಿವಾಸನಿಗೆ ಕೇಳಬೇ ಕೆಂದು ಯೋಚಿಸತೊಡಗಿದೆನು.

ಒಂದುದಿನ ಮಗಳು ವಕೀಲರ ಮನೆಗೆ ಹೋದಾಗ, ಅವರ ಅಡುಗೆಯವಳು ತುಂಗಾಬಾಯಿಯವರಿಗೆ 'ಬಾಯವರೆ, ನಿಮ್ಮ ಸೊಸೆ ಬಂದಳು' ಎಂದು ಪದ್ಮೆಯನ್ನು ನೋಡಿ ಅಂದಳಂತೆ. ಅದಕ್ಕಾಗಿ ಪದ್ಮೆಯು ಸಿಟಿದುಕೊಂಡು ಬಂದು ಆ ಸುದ್ದಿಯನ್ನು ಹೆಂಡತಿಗೆ ಹೇಳಿದಳು. ಅವಳು ಸುಮ್ಮನಿರದೆ ಅಡುಗೆಯವಳನ್ನು ಕರೆಯಿಸಿ ಅವಳಿಗೆ ಹಾಗೇಕೆ ಪದ್ಮೆಗೆ ಅಂದೆಯೆಂದು ಸಿಟ್ಟಿಗೆದ್ದಂತೆ ನಟಿಸಿ ಕೇಳಿದಳು. ಅಡುಗೆಯವಳು, 'ನಾನೇನು ನಿಮ್ಮ ಮಗಳಿಗಂದೆನು? ಯಜಮಾನರೂ ಯಜಮಾನತಿಯರೂ ಮಾತಾಡುವುದನ್ನು ಕೇಳಿ ನಿಮ್ಮ ಮಗಳಿಗೆ ತುಂಗಾಬಾಯಿಯವರ ಸೊಸೆಯಂದೆಂದೆನು' ಅಂದಳು. ಹೆಂಡತಿಯು ಅದೇ ಮಾತು ಕೆದರಿ ಅಡುಗೆಯವಳಿಗೆ, 'ಏನೆಂದು ಮಾತಾಡುತ್ತಿದ್ದರು?' ಅವಳು, 'ಅವರು ತಮ್ಮ ಮಗಳನ್ನು ಕೇಳಿದರೆ ಶ್ರೀನಿವಾಸನಿಗೆ ಲಗ್ನ ಮಾಡಲಿಕ್ಕೆ ಅಡ್ಡಿಯಿಲ್ಲ. ಶ್ರೀನಿವಾಸನ ಮನಸ್ಸಿಗೆ ಪದ್ಮೆಯು ಬಂದಿದ್ದಾಳೆ. ಆದರೆ ನಾವೇ ಕುಳಿತು ಕನ್ಯೆಯನ್ನು ಕೇಳುವುದು ಹೇಗೆ?' ಎಂದು ತಮ್ಮ ತಮ್ಮೊಳಗೆ ನುಡಿಯುವುದನ್ನು ಕೇಳಿದೆನು. ಅಡುಗೆ ಮಾಡುವವಳು ಮನೆಯ ಮಾತನ್ನು ಹೊರಗೆಡಹುವಳು ಎಂದು ಸುದ್ದಿಯನ್ನು ಮಾತ್ರ ಅವರಿಗೆ ತಿಳಿಸಬೇಡಿರಿ' ಎಂದು ಬೇಡಿಕೊಂಡಳು; ಮತ್ತು ತನ್ನ ತಪ್ಪಿಗಾಗಿ ಕ್ಷಮೆ ಬೇಡಿದಳು. ಹೆಂಡತಿಯು, 'ಇದರಲ್ಲೇನು ತಪ್ಪಿದೆ. ಸುದ್ದಿಯನ್ನು ಕೇಳಲಿಕ್ಕೆ ನಿನ್ನನ್ನು ಕರಿಸಿದ್ದೆನಷ್ಟೆ' ಎಂದು ಹೇಳಿ ಆಕೆಯನ್ನು ಕಳುಹಿದಳು.

ಗೋವಿಂದರಾಯರ ಪುರೋಹಿತರನ್ನು ಕರೆದು ಅವರಿಂದ ಶ್ರೀನಿವಾಸನ ಗೋತ್ರನಕ್ಷತ್ರಗಳನ್ನು ಕೇಳಿ ಎಲ್ಲ ವೈದಿಕ ವಿಷಯಗಳು ಕೂಡುತ್ತವೆಂದು ಕಂಡುಹಿಡಿದೆನು. ಮರುದಿವಸ ಶುಭಮುಹೂರ್ತದಲ್ಲಿ ನಾನೂ ಹೆಂಡತಿಯೂ ವಕೀಲರ ಮನೆಗೆ ಹೋಗಿ, 'ಪದ್ಮೆಯನ್ನು ಶ್ರೀನಿವಾಸನಿಗೆ ಕೊಡಬೇಕೆಂದು ನಮ್ಮೆಲ್ಲರ ಇಚ್ಛೆಯಿದೆ. ಎಲ್ಲ ವೈದಿಕ ವಿಷಯಗಳೂ ಕೂಡಿಬರುತ್ತವೆ. ಲೌಕಿಕ ವಿಚಾರವನ್ನು ಮಾಡುವುದಾದರೆ, ನಾವು ಬಡವರು, ನೀವು ಸಿರಿವಂತರು. ನಿಮ್ಮ ಜೊತೆಗೆ ನಾವು ಹತ್ತಲಾರೆವು.

ಆದರೂ ತಮ್ಮಂಥವರ ಮನೆಗೆ ಮಗಳನ್ನು ಕೊಡಬೇಕೆಂಬುವ ಅಭಿಲಾಷೆಯಿಂದ ತಮ್ಮ ಕಡೆಗೆ ಬಂದಿರುವೆವು. ಕೊಡುಕೊಳ್ಳುವ ಮಾತಿದ್ದರೆ ತಮ್ಮ ಪುರೋಹಿತರ ಕಡೆಯಿಂದ ತಿಳಿಸೋಣವಾಗಬೇಕು' ಎಂದು ಅತಿ ವಿನಯಪೂರ್ವಕ ಅರಿಕೆ ಮಾಡಿಕೊಂಡೆವು. ಆದಕ್ಕೆ ಗೋವಿಂದ ರಾಯರು, 'ಆಚಾರ್ಯರೆ, ನೋಡಿರಿ, ಈಗಿನ ದಿವಸಗಳು ಬೇರೆ. ಹುಡುಗನ ಮನಸ್ಸಿಗೆ ಕನ್ಯೆ ಬಂದ ಮೇಲೆ, ನಮ್ಮ ವಿಚಾರ. ಮದುವೆಯ ಕೆಲಸದಲ್ಲಿ ಮನೆಯವರೆಲ್ಲರನ್ನೂ ವಿಚಾರಿಸಬೇಕಾಗುತ್ತದೆ. ವಿಚಾರಮಾಡಿ ಪುರೋಹಿತರ ಕಡೆಯಿಂದ ತಿಳಿಸುತ್ತೇನೆ' ಎಂದರು. ತುಂಗಾಬಾಯಿಯವರೂ ಆದರಂತೆಯೆ ಮಾತಾಡಿದರು.

ನನ್ನ ಮನದಲ್ಲಿ ಸಂಶಯ ಉದ್ಭವಿಸತೊಡಗಿ, ನಾನು, ಹೆಂಡತಿಗೆ 'ರಾಯರು ಹೀಗೇಕೆ ಉತ್ತರ ಕೊಟ್ಟರು? ಅಡುಗೆಯವಳೇನು ಕುಚೋದ್ಯ ಮಾಡಿರಲಿಕ್ಕಿಲ್ಲವೆ? ತುಂಗಾಬಾಯಿಯವರೂ ಅದೇ ಉತ್ತರವನ್ನೇಕೆ ಕೊಟ್ಟಿರಬಹುದು? ಕನ್ಯೆ ಮಾಡಿಕೊಳ್ಳುವುದು ಅವರ ಮನಸ್ಸಿಗೆ ಬಂದಿರಲಿಕ್ಕಿಲ್ಲವೇನು?' ಎಂದು ಕೇಳಿದೆನು. ಆಕೆಯು 'ನಿಮ್ಮ ತಲೆಯೊಳಗಿನ ಸಂಶಯಗಳೇ ತೀರುವುದಿಲ್ಲ. ಕನ್ಯೆ ಕೇಳಿದೊಡನೆಯೆ, ಯಾರಾದರೂ ಒಮ್ಮೆಲೆ, 'ಕನ್ಯೆ ಮನಸ್ಸಿಗೆ ಬಂದಳು, ನಿಶ್ಚಯವಾಗಲಿ' ಎಂದು ಎಲ್ಲಿಯಾದರೂ ನುಡಿದುದುಂಟೇ? ನಾಳೆ ತಾನೆ ಅವರ ಪುರೋಹಿತರು ಬಂದೇ ಬರುವರು. ಆ ಮೇಲೆ ಎಲ್ಲ ಸಂಗತಿಯು ತಿಳಿಯುವುದು. ವ್ಯರ್ಥ ಸಂಶಯ ತೆಗೆದುಕೊಳ್ಳುತ್ತ ಕುಳಿತರೆ ಕೆಲಸವೆ ಕೆಟ್ಟು ಹೋಗುವುದು. ಯಾವಾಗಲೂ ಶುಭ ಮಾತಾಡುತ್ತ ಹೋಗಬೇಕು' ಎಂದು ಸೂಚಿಸಿದಳು.

ಮರುದಿವಸ ಮುಂಜಾವಿನಲ್ಲಿ ಪುರೋಹಿತರು ಬಂದರು. ಅವರಿಗೆ ನಮಸ್ಕರಿಸಿ ಆಸನದ ಮೇಲೆ ಕೈಹಿಡಿದು ಕುಳ್ಳಿರಿಸಿ, 'ಆಚಾರ್ಯರೆ, ರಾಯರ ನಿರೋಪವೇನು? ಎಂದು ಕೇಳಿದೆನು.

ಪುರೋಹಿತರು— ಅದನ್ನೇ ಹೇಳಲಿಕ್ಕೆ ಬಂದಿದ್ದೇನೆ. ನೀವು ಸುದೈವಿಗಳು.

ನಾನು—ಆದಿರಲಿ. ರಾಯರು ನಮ್ಮ ಕನ್ಯೆಯ ವಿಚಾರದಲ್ಲಿ ಏನನ್ನುವರು ?

ಪು—ಆನೆ ಕಟ್ಟಬೇಕಾದರೆ ಅದರ ವೆಚ್ಚದ ಲೆಕ್ಕವನ್ನು ಹಾಕ ಬೇಕಾಗುವುದು.

ನಾ—ಆಚಾರ್ಯರೆ, ಆನೆಯ ಲೆಕ್ಕ ಹಿಂದುಗಡೆಗೆ ಹಾಕೋಣ. ಸದ್ಯದಲ್ಲಿ ನನ್ನ ಪ್ರಶ್ನೆಗೆ ಉತ್ತರ ಕೊಡುವುದಾಗಲಿ.

ಪು—ಶ್ರೀನಿವಾಸನೇ ಪದ್ಮಾವತಿಯ ಕೈಹಿಡಿದ ಮೇಲೆ ನಡುವಿನವರು ಮಾಡುವುದೇನು ?

ನಾನು—ಶ್ರೀನಿವಾಸನು ಪ್ರತಿವರ್ಷ ನವರಾತ್ರಿಯಲ್ಲಿ ಪದ್ಮಾವತಿಯ ಕೈಹಿಡಿಯುತ್ತಾನೆ. ನನಗೆ ವೇಂಕಟೇಶ ಮಾಹಾತ್ಮ್ಯದ ಕಥೆ ಬೇಡ. ನನ್ನ ಮಗಳ ಮದುವೆ ಬೇಕಾಗಿದೆ.

ಪು—ಅದನ್ನೇ ಹೇಳುತ್ತಿದ್ದೇನೆ. ರಾಯರ ಶ್ರೀನಿವಾಸನು ಮಾಡಿಕೊಂಡರೆ ನಿಮ್ಮ ಮಗಳನ್ನೇ ಮಾಡಿಕೊಳ್ಳುವೆನೆಂದು ಅಂದು ಬಿಟ್ಟಿರುವನು.

ನಾ—ರಾಯರೂ ತುಂಗಾಬಾಯಿಯವರೂ ಅದಕ್ಕೆ ಒಪ್ಪಿಗೆ ಕೊಟ್ಟಿದ್ದಾರಷ್ಟೇ ?

ಪು—ಕೊಟ್ಟಿದ್ದಾರೆ. ಮದುವೆ ತಿಂಗಳೊಪ್ಪತ್ತಿನಲ್ಲಿ ಜರುಗಬೇಕಂತೆ. ಆಚಾರ್ಯರೆ, ನಿಮ್ಮ ವಿಷಯಕ್ಕೆ ನನಗೆ ವಿಶೇಷ ಗೊತ್ತಿಲ್ಲದಿದ್ದರೂ ನಿಮ್ಮ ಬಗ್ಗೆ ರಾಯರ ಮುಂದೆಯೂ ಬಾಯವರ ಮುಂದೆಯೂ ಪ್ರಶಂಸೆ ಮಾಡಿ ಅವರ ಮನವೊಲಿಸಿದೆನು. ಹತ್ತು ಸುಳ್ಳು ಹೇಳಿ ಒಂದು ಲಗ್ನ ಮಾಡಬೇಕಂತೆ.

ನಾ—ಆಚಾರ್ಯರೆ, ಮಹದುಪಕಾರ ಮಾಡಿದಿರಿ.

ಪು—ಒಳ್ಳೆಯದು. ತಾವು ಚಿಂತಿಸಕೂಡದು.

ಲಗ್ನದ ಮುಹೂರ್ತವೂ ಗೊತ್ತಾಯಿತು. ಹೆಂಡತಿಯು ಅವರಿಗೆ ಪತ್ರಹಾಕಬೇಕು ಇವರಿಗೆ ಪತ್ರಹಾಕಬೇಕೆಂದು ಪತ್ರ ಬರಿಸಿದಳು. ನಾನೂ ಶೂರ್ಪಾಲಿಯ ನಾಮದ ನಾರಾಯಣ ಮೊದಲಾದ ಜನರಿಗೂ

ವೆಂಕಟರಾಯರಿಗೂ ದೇಶಪಾಂಡೆ ರಾಮರಾಯರಿಗೂ ಪತ್ರ ಬರೆದೆನು. ಹಣಮನು ಭೀಮನಿಗೆ ಸಹಕುಟುಂಬ ಲಗ್ನಕ್ಕೆ ಬರಬೇಕೆಂದು ತನ್ನ ಕೈಬರಹದ ಮೂಲಕ ಪತ್ರದಿಂದ ತಿಳಿಸುವುದನ್ನು ನೋಡಿದರೂ ಅವನಿಗೆ ಅಡ್ಡಿ ಮಾಡದೆ ಗಂಭೀರವಾಗಿ ಮೌನದಿಂದಿದ್ದೆನು. ಮದುವೆಗೆ ಜನರು ಬರತೊಡಗಿದರು. ಇತ್ತ ಮನೆಯಲ್ಲಿ ಹೆಂಡತಿಯ ಉತ್ಸಾಹ ಕೇಳುವುದೇನು? ಅಷ್ಟು ಸಾಮಾನು ಬೇಕು ಇಷ್ಟು ಸಾಮಾನು ಬೇಕೆಂದು ಹೇಳಿಹೇಳಿ ಹೇರಳವಾಗಿ ಸಾಮಗ್ರಿಯನ್ನು ಸಿದ್ಧಪಡಿಸಿದಳು.

ಅರಿವೆ ಅಂಚಡಿಗಳ ವಿಷಯವಂತೂ ನನ್ನ ತಲೆಯನ್ನೆ ಎಬ್ಬಿಸ ತೊಡಗಿತು. ಅಂಗಡಿಯವರು ತಂದಿಟ್ಟ ಹೊರೆಯನ್ನು ಬಿಚ್ಚಿ ಚೆಲ್ಲಾ ಪಿಲ್ಲಿ ಮಾಡಿ ಹೆಂಡತಿ ಪಮ್ಮಿ ಸೊಸೆಯಂದಿರು, 'ತೋಪು ತೆನೆತಿರುವಿದ ಫರಾಸಪೇಟೆಯ ಸೀರೆ ನೆಟ್ಟಗಿದೆ. ಕೋಯಿಮುತ್ತೂರ ಪತ್ತಲದ ಕಿಂತ ಬನಾರಸದ ಪತ್ತಲ ಒಳ್ಳೆಯದು. ಈ ಹಳೆತರಹದ ಪೀತಾಂಬರ ಬೇಡ. ಅದನ್ನು ಈಗ್ಗೆ ಯಾರೂ ಉಡುವುದಿಲ್ಲ. ಶಾಹಪುರದ ಜರ ದಂಚಿನ ಸೀರೆ ಧಡೋತಿ. ಮೇಲೆ ಉಟ್ಟುಕೊಳ್ಳಲಿಕ್ಕೆ ಟಿಕೇಕರ ಪತ್ತಲ ಗಳು ಬೇಕು. ಖಣ ಒಳಿತಲ್ಲ. ಬ್ಲಾಝುಗಳು ಬೇಕು,' ಎಂದು ನನ್ನ ಮೋರೆಗೆ ಹಿಡಿದು ತೋರಿಸುವರು. ಆಗ್ಗೆ ನಾನು ಹೆಂಡತಿಗೆ, 'ಏನೇ ನೀನು ಜಂಬುಕಂಡಿಯ ಶ್ರೀಮಂತರ ಅರಸಿಯಲ್ಲ. ಖರ್ಚಿನ ವಿಷಯ ನಿನ್ನ ತಲೆಯಲ್ಲಿ ಉಳಿದಂತೆ ತೋರುವುದಿಲ್ಲ. ಒಬ್ಬೊಬ್ಬರು ಒಂದೊಂದು ಧಡೋತಿ ಸೀರೆ ಕೊಳ್ಳಿರಿ. ಆ ಲಿವಿಲಿವಿ ಪತ್ತಲಗಳು ಏತಕ್ಕೆ ಬರುವುವು? ದಾಸರ ಆಟವಲ್ಲ; ದೋಸೆಯ ಊಟವಲ್ಲ; ಪತ್ತಲದ ಉಡುಪಲ್ಲ' ಎಂದೆನು. ಅದಕ್ಕೆ ಅವಳು, 'ಚೆಂದದ ಕೆಲಸ; ದೊಡ್ಡವರ ಸಂಗಡ ನೆಂಟುತನ; ಹಣಮನು ಇನ್ನಾರು ತಿಂಗಳಲ್ಲಿ ಮಾಮಲೇದಾರನಾಗು ವನು. ಸಾಲವಾದರೆ ಅವನು ಮುಟ್ಟಿಸಲಿಕ್ಕೆ ಗಟ್ಟಿಯಿದ್ದಾನೆ,' ಎಂದು ತಮಗೆ ಬೇಕಾದ ವಸ್ತ್ರಗಳನ್ನು ಇಟ್ಟುಕೊಂಡು ಬಿಟ್ಟರು.

ಮನೆಯ ಮುಂದೆ ಭವ್ಯ ಮಂಟಪವು ತಳಿರು ತೋರಣಗಳಿಂದ ಕಂಗೊಳಿಸತೊಡಗಿತು. ಝುಲ್ಲಿ ಪಟ್ಟಿಗಳಿಂದ ಸುಶೋಭಿತವಾಯಿತು.

ಅಲ್ಲಲ್ಲಿ ಝುಗಝುಗಿಸುವ ದೀಪಗಳು ಇಳಿಬಿದ್ದುವು. ಮಂಟಪದ ಮುಖ ದಲ್ಲಿ ಕೊನೆ ಹಾಕಿದ ಬಾಳೆಯ ಗಿಡಗಳು ನಳನಳಿಸುತ್ತ ದ್ವಾರಪಾಲಕ ರಂತೆ ನಿಂತುವು.

ಮುಂಜಾವಿನಲ್ಲಿ ಸರಿಯಾಗಿ ಒಂಬತ್ತು ಗಂಟೆಗೆ ಮಂತ್ರಾಕ್ಷತೆಯ ಮುಹೂರ್ತ. ವರನನ್ನು ಕರೆದುಕೊಂಡು ಬರಲಿಕ್ಕೆ ಸಿದ್ಧರಾದೆವು. ಮುಹೂರ್ತ ಅರ್ಧ ತಾಸು ಉಳಿಯಿತು. ಮಂಟಪದಲ್ಲಿ ಜನರಿಲ್ಲದುದನ್ನು ಕಂಡು ನಾನು, 'ಹಣಮಪ್ಪಾ ಊರವರಿಗೆ ಸುಳ್ಳುವುತಣ ಕೊಟ್ಟಿರುವೆಯೊ ಇಲ್ಲವೊ? ಜನರು ಬಂದಿರುವುದಿಲ್ಲ. ಕುರ್ಚಿಗಳು ಬರಿದಾಗಿವೆ. ಹಾಸಿದ ಗಾದೆಗಳ ಮೇಲೆ ಯಾರೂ ಇಲ್ಲ,' ಎಂದುದಕ್ಕೆ ಅವನು, 'ಜನರು ಈಗ ತಾನೆ ಬರುವರು. ನೀವು ವರನನ್ನು ಕರೆದು ತರಲಿಕ್ಕೆ ಹೋಗಬೇಕು,' ಎಂದುದರಿಂದ ನಾವೆಲ್ಲರೂ ವರನನ್ನು ಕರೆದುಕೊಂಡು ಬರುವಷ್ಟರಲ್ಲಿ ಹಂದರದ ಎದುರಿನಲ್ಲಿ ಮೋಟರುಗಳು ದಮಣಿಗಳು ಟಾಂಗಗಳು ನಿಂತುಕೊಂಡಿದ್ದುವು. ಆದಲ್ಲದೆ ಹೆಂಗಸರೂ ಗಂಡಸರೂ ಲಗುಬಗೆ ಯಿಂದ ಬರತೊಡಗಿದ್ದರು. ಹಂದರವು ತುಂಬಿಹೋಯಿತು. ಎಷ್ಟೋ ಜನರು ಸ್ಥಳವಿಲ್ಲದೆ ನಿಂತುಕೊಂಡರು. ಹಣಮನಿಗೆ ಅವರ ಆತಿಥ್ಯ ಮಾಡುವುದು ದುಸ್ತರವಾಗಿ ಹೋಯಿತು. ಅಂತಃಪಟ ಎತ್ತಿತು. ಪುರೋಹಿತರು ಗಡಿಯಾರವನ್ನು ಹಿಡಿದು ಮುಹೂರ್ತ ನೋಡಲಾ ರಂಭಿಸಲು ನಾನು, ಗಳಿಗೆಬಟ್ಟಲ ಬಿದ್ದ ಕೂಡಲೆ ಮಂತ್ರಾಕ್ಷತೆಯಾಗ ಬೇಕೆ'ಂದು ಸೂಚಿಸಿದೆನು. ಗಳಿಗೆಬಟ್ಟಲ ಮುಳುಗಿತು! ಗಡಿಯಾರ ದಲ್ಲಿ ತತ್‌ಕ್ಷಣವೇ ಒಂಬತ್ತು ಹೊಡೆಯಿತು. ಮಂತ್ರಾಕ್ಷತಿ ಬಿದ್ದುವು!

ಹಳೆ ಕಣ್ಣು, ಹೊಸ ತಮಾಷೆ! ಪಮ್ಮಿಯ ಮದುವೆಯ ಮಾದ ರಿಯೆ ಬೇರೆ! ವರದಕ್ಷಿಣೆಯಿಲ್ಲ, ಕೊಡುತೆಗೆದುಕೊಳ್ಳುವ ಮಾತಿಲ್ಲ. ಮದುವೆಗೆ ಮನೆಮನೆಗೆ ಬಾರಿಸುತ್ತ ಹೋಗಿ ಕೊಡುವ ಅವುತಣವಿಲ್ಲ. ಬಿಡಿಬಿಡಿಯಾಗಿ ಕುಳಿತ ಭೂಮದಲ್ಲಿ ಹಾಡಿಲ್ಲ, ಬೇಡಿ ಬೇಡಿ ಬಡಿಸಿ ಕೊಂಡು ಚರಗ ಚಲ್ಲುವುದಿಲ್ಲ. ಬೀಗ ಬೀಗರಲ್ಲಿ ಮೂದಲೆಯಿಲ್ಲ, ಮರು ಮಾತಿಲ್ಲ, ಬಿರುನುಡಿಯಿಲ್ಲ, ಸಿಟ್ಟಿಲ್ಲ. ಸೆಡವಿಲ್ಲ. ಉರುಟಣಿಯಿಲ್ಲ,

ಮದುಮಕ್ಕಳ ಮೆರವಣಿಗೆಯಿಲ್ಲ. ಹಂದರದ ಜಡ್ಡಿಲ್ಲ, ಮುಯ್ಯವಿಲ್ಲ, ಕಳವಿಲ್ಲ, ಮೋಸವಿಲ್ಲ. ಲೆಕ್ಕ ತಪ್ಪಿ ಮದುವೆಯ ವೆಚ್ಚವಿಲ್ಲ! ತವರು ಮನೆ ತೊರೆಯುವ ಮುಂದೆ ಮಗಳ ಅಳುವಿಲ್ಲ; ಅವಳನ್ನು ಕಳುಹುವ ನಮ್ಮ ಕಣ್ಣಲ್ಲಿ ಹನಿಯಿಲ್ಲ. ಮಗಳಲ್ಲಿ ನಮ್ಮ ಮನೆ ನೆನೆಯುವುದಿಲ್ಲ; ನಮ್ಮೊಳಗೆ ಅವಳ ಒಗೆತನದಲ್ಲಿ ಚಿಂತೆಯಿಲ್ಲ!

## ೨ ಪಿತಾಪುತ್ರಸಂವಾದ

ಲೌಕಿಕ ವಿಷಯುಗಳಿಗಿಂತ ಧಾರ್ಮಿಕ ವಿಷಯುಗಳೆಡೆಗೆ, ಮೊದಲಿನಿಂದಲು ನನ್ನ ಎಳೆತ ಹೆಚ್ಚು. ಶೂರ್ಪಾಲಿಯಲ್ಲಿ ಸಂಸಾರವು ಸಾಗುವ ಹಾಗಿದ್ದರೆ ನಾನೆಂದೂ ನರಸಿಂಹನ ಅಡಿಗಳಿಂದ ಕದಲುತ್ತಿರಲಿಲ್ಲ. ನನ್ನ ಹಾಗು ಮಕ್ಕಳ ಹೊಟ್ಟೆಗಾಗಿ ಅವರಿಗೆ ಲೌಕಿಕ ಶಿಕ್ಷಣ ಕೊಡಿಸಿದೆನು. ನಾನು ಬಯಸಿದುದೊಂದು, ದೈವವು ಬಗೆದುದು ಮಗದೊಂದು. ನಮ್ಮ ಮನೆಯ ಸಂಪ್ರದಾಯುಗಳು ನಾನಾದ ಬಳಿಕ ಕೊನೆಗಾಣುವುವೆಂದು ಮನಗಂಡೆನು.

ಒಂದು ದಿನ ಸಂಜೆಗೆ ಊಟವಾದ ಮೇಲೆ ನಾನೂ ಹಣಮನೂ ಮಾತಾಡುತ್ತ ಕುಳಿತೆವು. ಮಾತು ಪಮ್ಮಿಯ ಮದುವೆಯಿಂದ ಹೊರಟು ಹೊಸಬಗೆಯ ಆಚಾರವಿಚಾರಗಳ ಕಡೆಗೆ ಹರಿದುವು.

ನಾನು—ಹಣಮಾ, ಸುಧಾರಣೆಯೆಂಬುದನ್ನು ಕೈಕೊಂಡು, ಸನಾತನಧರ್ಮದ ವಿರುದ್ಧ ಬಂಡಣ ಹೂಡಿದ ಪುಂಡರ ಅಭಿಪ್ರಾಯವಾದರೂ ಏನು?

ಹಣಮ—ಈ ವಿಷಯುವನ್ನು ವಿಚಾರಿಸಬೇಕಾದರೆ ಧರ್ಮವೆಂದರೇನೆಂಬುದನ್ನು ತಿಳಿದುಕೊಳ್ಳಬೇಕಾಗುತ್ತದೆ. ಆದುದರಿಂದ ನೀವು ಮೊದಲು ಅದನ್ನು ಹೇಳಿರಿ.

ನಾ—ಧರ್ಮವು ಆಚಾರಪ್ರಭವವಾಗಿದೆ. ವೈದಿಕಸಮಾಜವು ಇಹಪರಗಳಲ್ಲಿ ಸದ್ಗತಿಯನ್ನು ಹೊಂದಬೇಕೆಂದು ಅಧಿಕಾರಿಗಳು ಹೇಳಿದ ಆಚಾರ ವ್ಯವಹಾರ ಪ್ರಾಯಶ್ಚಿತ್ತಗಳ ಶಾಸ್ತ್ರಕ್ಕೆ ಧರ್ಮಶಾಸ್ತ್ರವೆಂಬ

ಹೆಸರು. ಧರ್ಮಕ್ಕೆ ಸತ್ಯ ಅಸ್ತೇಯಾದಿ ಮೂಲಭೂತನೀತಿತತ್ವಗಳು ಅಡಿಗಲ್ಲಾಗಿವೆ.

ಈ ಧರ್ಮವು, ಅನಾದಿಯಿಂದ ಅಚ್ಚಳಿಯದ, ಮುಂದಾದರು ಮಾರ್ಪಡದೆ, ಸಾಗುವುದಿದ್ದುದರಿಂದ, ಸಾರ್ಥಕವಾಗಿ ಸನಾತನ ಧರ್ಮವೆಂದು ಹೆಸರುಪಡೆದಿದೆ. ಇದಕ್ಕೆ ಅವರ ಉತ್ತರವೇನು?

ಹ—ಆರ್ಯಸಮಾಜವು ಬಳೆಬಳೆದಂತೆ ಅದರಲ್ಲಿ ಆಚಾರವಿಚಾರ ಗಳಲ್ಲಿ ಬದಲಾವಣೆಯಾಗುತ್ತ ನಡೆಯಿತು. ವೇದಗಳಲ್ಲಿ ಹೇಳಿದ ಧರ್ಮವು ಧರ್ಮಸೂತ್ರಗಳ ಕಾಲದಲ್ಲಿ ಹೆಚ್ಚುಕಡಿಮೆಯಾದುದು ಕಂಡುಬರುತ್ತದ. ಹೀಗೆಯೇ ವರ್ಣಜಾತಿಗಳಲ್ಲಿ ಅನುಲೋಮ ಪ್ರತಿ ಲೋಮ ಸಂಬಂಧವಾಗಿ ಅಸಂಖ್ಯಜಾತಿಗಳು ಉತ್ಪನ್ನವಾದುವು. ವ್ಯವಹಾರದಲ್ಲಿಯೂ ಕಾಲಾನುಸಾರವಾಗಿ ಬದಲಾವಣೆಗಳಾದುವು. ಇಂತಹ ಹೊಸ ಸಮಸ್ಯೆಗಳನ್ನು ಬಿಡಿಸುವುದಕ್ಕಾಗಿ ಸ್ಮೃತಿಗಳು ಪುರಾಣಗಳು, ನಿಬಂಧಗಳು, ಸ್ಮೃತಿಗಳ ಮೇಲಿನ ಟೀಕೆ ಟಿಪ್ಪಣಿಗಳು ಇವುಗಳನ್ನು ಹೇಳುವುದು ಅವಶ್ಯವಾಯಿತು. ಈ ವಾಙ್ಮಯವನ್ನು ಕ್ರಮವಾಗಿ ಓದಿದರೆ ಆರ್ಯಸಮಾಜದಲ್ಲಿ ಬರಬರುತ್ತ ಆಚಾರ ವ್ಯವಹಾರ ಪ್ರಾಯಶ್ಚಿತ್ತಗಳಲ್ಲಿ ಮಾರ್ಪಾಟುಗಳಾದುದು ಕಂಡು ಬರುವುದು.

ನಾ—ಈಗೇಕೆ ವೈದಿಕ ಸಂಪ್ರದಾಯಕ್ಕೆ ಅಳವಡುವ ಧರ್ಮ ಶಾಸ್ತ್ರವನ್ನು ಬಳಕೆಯಲ್ಲಿ ತರಬಾರದು?

ಹ—ಧರ್ಮಕ್ಕೆ ರಾಜದಂಡವು ಆವಶ್ಯಕ. ವೈದಿಕ ಮಾರ್ಗವನ್ನ ವಲಂಬಿಸುವ ಸಾರ್ವಭೌಮರಿರುವ ವರೆಗೆ ಎಲ್ಲವು ಸರಿಯಾಗಿ ಹೋಯಿತು. ಭಾರತದಲ್ಲಿ ಜೈನ ಬುದ್ಧ ಅವೈದಿಕ ಧರ್ಮಗಳು ಹೊರಟು ಆ ಧರ್ಮದ ಅರಸರೇ ಕೆಲಕಾಲ ಸಾರ್ವಭೌಮರಾದರು. ವೈದಿಕ ಧರ್ಮಕ್ಕೆ ಉತ್ತೇಜನ ದೊರೆಯದೆ ಹೋಯಿತಲ್ಲದೆ, ಅವರ ಧರ್ಮವೇ ಬಳೆಯುತ್ತ ನಡೆಯಿತು. ಮುಸಲ್ಮಾನರು ಭಾರತೀಯರ ಧರ್ಮವನ್ನೇ ನಾಶಗೊಳಿಸಲು ಬಂದು, ಇಲ್ಲಿಯೆ ಬೀಡುಬಿಟ್ಟು ಆಳ

ತೊಡಗಿದರು. ಹೀಗಾಗಿ ವೈದಿಕಧರ್ಮವು ರಾಜದಂಡವನ್ನು ಕಳೆದುಕೊಂಡು, ಅನೇಕ ವಿಧವಿಪರ್ಯಯರೊಂದಿಗೆ ಬಳಕೆ ಮಾಡುತ್ತ, ಅದಕ್ಕೆ ಸಾಮಾಜಿಕ ಸ್ವರೂಪವನ್ನು ತಳೆದು ನಿಲ್ಲಬೇಕಾಯಿತು. ಆದರೂ ಮಹಮ್ಮದೀಯರ ಆಳಿಕೆಯಲ್ಲಿ ಅವರ ಸಂಸ್ಕೃತಿಯಿಂದ ವೈದಿಕ ಧರ್ಮದ ಮೇಲೆ ಅಷ್ಟೊಂದು ಆಘಾತವಾದಂತೆ ತೋರುವುದಿಲ್ಲ. ರಾಜದಂಡವು ಪಾಶ್ಚಾತ್ಯರ ಕೈಯಲ್ಲಿ ಹೋದ ಬಳಿಕ ನಮ್ಮಲ್ಲಿ ಎಲ್ಲವೂ ಬುಡಮೇಲಾಯಿತು.

ನಾ—ಅದು ಹೇಗೆ? ಅವರು ನಮ್ಮ ಧರ್ಮದಲ್ಲಿ ಕೈಹಾಕುವುದಿಲ್ಲವೆಂದು ಸಾರಿರುವರಂತೆ?

ಹ— ಹಾಗೆ ಹೇಳಿದುದು ನಿಜ. ಅದರಿಂದ ನೀವು ರಾಜದಂಡದ ಆಧಾರವನ್ನೇ ಕಳೆದುಕೊಂಡಿರಿ! ಪಾಶ್ಚಾತ್ಯರು ನಮ್ಮಲ್ಲಿ ಹೊಸ ಸಂಸ್ಕೃತಿಯನ್ನೇ ತಂದು ಶಾಲೆಕಾಲೇಜಗಳ ಮೂಲಕ ಅದನ್ನು ಹರಡಲಾರಂಭಿಸಿದರು. ಅದರಿಂದ ನಮ್ಮ ಆಚಾರವಿಚಾರ, ಆಹಾರವಿಹಾರ, ವೇಷಭೂಷಣಗಳಲ್ಲಿ ಬದಲಾವಣೆಯಾದುದು ಸುತ್ತೆಲ್ಲ ಕಂಡುಬರುವುದು. ಅಪ್ಪಾ, ವೈದಿಕಧರ್ಮದ ವ್ಯಾಪಕತೆಯನ್ನು ಹೇಳಿರಿ; ಆ ಮೇಲೆ ಮತ್ತೆ ವಿಚಾರಿಸುವಾ?

ನಾ—ವೈದಿಕನು ಮುಂಜಾವಿನಲ್ಲೆದ್ದು, ರಾತ್ರಿ ಮಲಗಿ ಮರುದಿನ ಅದೇ ವೇಳೆಗೆ ಏಳುವ ವರೆಗೆ ಮಾಡುವ ಎಲ್ಲ ಕೆಲಸಗಳಿಗೆ ಧರ್ಮಶಾಸ್ತ್ರವು ನಿಯಮಗಳನ್ನು ಹೇಳುತ್ತದೆ. ಹುಟ್ಟಿದತ್ತಣಿಂದ ವಿಶೇಷವಾಗಿ ಉಪನಯನದಿಂದ ಸಾಯುವ ವರೆಗೆ ವೈದಿಕನು ಜರುಗಿಸಬಲ್ಲ ಎಲ್ಲ ಕಾರ್ಯಗಳಿಗೆ ಧರ್ಮದ ನಿಯಮವಿದೆ. ಕಿಂಬಹುನಾ, ಮಾನವನ ಎಲ್ಲ ಕಾರ್ಯಗಳಿಗೆ ನಿಯಮಗಳನ್ನು ಹೇಳಲಾಗಿದೆ.

ಹ— ಪಾಶ್ಚಾತ್ಯರ ಸಂಸ್ಕೃತಿಯಲ್ಲಿ, ಮಾನವನ ಕಾರ್ಯಗಳಲ್ಲಿ ಎರಡು ಮುಖ್ಯ ಭೇದಗಳನ್ನು ಕಲ್ಪಿಸಲಾಗಿದೆ. ಧರ್ಮ, ರಾಜಕಾರಣ. ಧಾರ್ಮಿಕ ವಿಷಯಗಳಲ್ಲಿ ಪಾದ್ರಿಗಳಿಗೂ ಅವರ ಗುಡಿಗಳಿಗೂ ಗಂಟು.

ಆ ಸಂಕುಚಿತ ಕ್ಷೇತ್ರವನ್ನು ಬಿಟ್ಟರೆ, ಮಿಕ್ಕ ಎಲ್ಲೆಡೆಯಲ್ಲಿ ರಾಜದಂಡವು ಅಕಾಂಡತಾಂಡವ ಮಾಡುತ್ತದೆ. ನಮ್ಮಲ್ಲಿಯೂ ಹಾಗೆಯೆ ನಡೆದಿದೆ. ಧರ್ಮಾಚರಣೆಯಲ್ಲಿ ನೀವು ಅಷ್ಟೊಂದು ದೀರ್ಘಕ್ಕೆ ಹೋಗದೆ ಇದ್ದುದರಿಂದ ಅವರ ಸಂಸ್ಕೃತಿಯ ಆಕ್ರಮಣವು ತೋರುವುದಿಲ್ಲ.

ನಾನು—ಆಧಿಭೌತಿಕ ಆಧಿದೈವಿಕ ಆಧ್ಯಾತ್ಮಿಕ ವಿಷಯದಲ್ಲಿ ಅವರ ವಿಚಾರವೇನು? ಆ ವಿಷಯದಲ್ಲಿಯೂ ನಮ್ಮ ಜನರ ಮೇಲೆ ಪರಿಣಾಮವಾಗಿದೆಯೋ?

ಹ—ಬಲವಾಗಿ ಆಗಿದೆ. ಅವರು ಭೌತಿಕ ಶಾಸ್ತ್ರದಲ್ಲಿ ಮುಂದುವರಿದು ಅನೇಕ ಶೋಧಗಳನ್ನು ಸಪ್ರಮಾಣವಾಗಿ ಗೊತ್ತುಹಚ್ಚಿರುವರು. ಅದರಿಂದ ನಮ್ಮಲ್ಲಿ ಭೂಗೋಲ ಖಗೋಲ ಭೂಗರ್ಭ ರಸಾಯನ ವೈದ್ಯಕೀಯ ಯಾಂತ್ರಿಕ ಮೊದಲಾದ ಶಾಸ್ತ್ರಗಳ ವಿಚಾರಗಳಲ್ಲಿ ವಿಚಾರಪಲ್ಲಟವಾಗಿದೆ. ಪಂಚಮಹಾತತ್ವಗಳನ್ನು ಅಭ್ಯಾಸಿಸಿ ಅವರು ಅವುಗಳ ಮೇಲೆ ಪ್ರಭುತ್ವವನ್ನು ಕೆಲಮಟ್ಟಿಗೆ ನೆಲೆಗೊಳಿಸಿದುದರಿಂದ ನಮ್ಮ ಆಧಿದೈವಿಕ ಕಲ್ಪನೆಗಳಿಗೆ ಆಘಾತವಾಗಹತ್ತಿದೆ. ರಸಾಯನ ವೈದ್ಯಕೀಯ ವಿಷಯಗಳಿಂದ ನಮ್ಮಲ್ಲಿ ಭಕ್ಷ್ಯಾಭಕ್ಷ್ಯದ ವಿಚಾರದಲ್ಲಿ ಬದಲಾವಣೆಯಾಗತೊಡಗಿದೆ. ಅವರೇ ರಾಜರಾದುದರಿಂದ ಅವರ ವೇಷಭೂಷಣಗಳು ಆಚಾರಗಳು ಅನುಕರಣದಲ್ಲಿ ಬರತೊಡಗಿವೆ. ಧಾರ್ಮಿಕವೆಂದು ತಿಳಿದ ಎಷ್ಟೋ ವ್ಯವಹಾರಪ್ರಾಯಶ್ಚಿತ್ತಧರ್ಮಗಳು ಅವರ ರಾಜಕಾರಣದ ಲೆಕ್ಕಕ್ಕೆ ಹತ್ತಿಹೋಗಿವೆ. ಇನ್ನೂ ಹೋಗುವುವಿವೆ. ನಮ್ಮ ಧರ್ಮಾಚರಣೆಯು ಕೇವಲ ವೈಯಕ್ತಿಕ ಸ್ವರೂಪವನ್ನು ತಳೆಯತೊಡಗಿದೆ. ನಮ್ಮ ಆಧ್ಯಾತ್ಮಿಕ ವಿಚಾರದಲ್ಲಿ ಅವರಲ್ಲಿಯೂ ಆಸ್ಥೆಯಿದೆ. ಅದು ಅವರ ಕೇವಲ ಕೆಲ ವಿದ್ವಾಂಸರಿಗೆ ಮಾತ್ರ ಗೊತ್ತಿದೆ. ಆಧಿಭೌತಿಕ ಶಾಸ್ತ್ರೀಯ ಶೋಧನೆಯ ಮೇಲೆ ಅವರ ಆಧ್ಯಾತ್ಮಿಕ ವಿಚಾರಗಳು ನಿಂತುಕೊಂಡಿವೆ. ಭಾರತೀಯರ ಆಧ್ಯಾತ್ಮಿಕ ವಿಚಾರಗಳು ಇನ್ನೂ ಅವರ ಮೇಲೆ ವರ್ಚಸ್ಸನ್ನು ಹರಡಿವೆಯೆಂದೆನ್ನಲಿಕ್ಕೆ ಅಡ್ಡಿಯಿಲ್ಲ. ನಮ್ಮಲ್ಲಿ ವೇದವಾಕ್ಯಗಳನ್ನು ಸಿದ್ಧಾಂತವಾಗಿಟ್ಟು

ಕೊಂಡು ಅವುಗಳಿಗೆ ಅಳವಡುವಂತೆ ತರ್ಕವನ್ನು ಕೈಕೊಳ್ಳ ಲಾಗುತ್ತದೆ. ಆದರೆ ಅವರಲ್ಲಿ ಶುದ್ಧ ತರ್ಕದಿಂದಲೇ ಸಿದ್ಧಾಂತವನ್ನು ಮಾಡಲಾಗುತ್ತದೆ.

ನಾ-ವರ್ಣಜಾತಿ ಆಶ್ರಮಗಳ ಸಂಬಂಧದಲ್ಲಿ ಅವರೇನೆನ್ನುವುದು?

ಹ—ನಾವು ತಿಳಿದ ವರ್ಣಜಾತಿ ಆಶ್ರಮಗಳೆಂಬ ವಿಷಯ ಅವ ರಿಗೆ ಗೊತ್ತೇ ಇಲ್ಲ. ಮೇಲಾಗಿ ಅದನ್ನು ಅವರು ಲಕ್ಷ್ಯಕ್ಕೂ ತರುವುದಿಲ್ಲ. ಅವರ ರಾಜಕಾರಣದಲ್ಲಿ ಪ್ರಜಾಪ್ರಭುತ್ವದ ತತ್ವವು ನೆಲೆಗೊಂಡಿದೆ. ಅಂದರೆ ರಾಜ್ಯದಲ್ಲಿ ನೆಲಿಸಿದ ಎಲ್ಲ ಪ್ರಜೆಗಳಿಗೆ ಸಮಾನ ಹಕ್ಕು ಬಾಧ್ಯತೆಗಳು ದೊರೆತಿವೆ. ಆದುದರಿಂದ ನಾವು ಹೊಸ್ತಿಲ ಹೊರಗೆ ಬಿದ್ದೆವೆಂದರೆ ವರ್ಣಜಾತಿಗಳ ತಾರತಮ್ಯವನ್ನು ಮರೆಯಲೇ ಬೇಕಾಗಿದೆ. ಆಶ್ರಮದ ವಿಷಯದಲ್ಲಿ ಮಾತ್ರ ಸ್ವಾತಂತ್ರ್ಯವಿದೆ!

ನಾ—ಹಣಮಾ, ಅಂದಮೇಲೆ ಧರ್ಮಕ್ಕೆ ಸ್ಥಾನವೇ ಉಳಿದಿರುವು ದಿಲ್ಲವೇನು?

ಹ—ಹಾಗಲ್ಲ. ಇಷ್ಟವಿದ್ದವರು ತಮಗೆ ಬೇಕಾದ ಅಳಿದುಳಿದ ಆಚಾರಧರ್ಮ, ಮತ, ಸಂಪ್ರದಾಯಗಳನ್ನು ಇತರರಿಗೆ ಅಡ್ಡಿಮಾಡದೆ ಆಚರಿಸಲು ಸಂಪೂರ್ಣ ಅಧಿಕಾರವಿದೆ.

ನಾ –ಇಂಗ್ರೇಜಿ ಶಿಕ್ಷಣವನ್ನು ಮಕ್ಕಳಿಗೆ ಕೊಡಿಸದಿದ್ದರೆ ನಮ್ಮ ಧರ್ಮ ಉಳಿಯುವ ಸಂಭವವಿದೆಯೋ?

ಹ—ಆ ಭಾಷೆಯನ್ನು ಕಲಿತರೇನು, ಕಲಿಯದಿದ್ದರೇನು? ದೇಶೀಯ ಭಾಷೆಗಳಲ್ಲಿಯೂ ಅದೇ ಸಂಸ್ಕೃತಿಯು ಬೆರೆತುಹೋಗಿದೆ. ದಿನವೊಂದಕ್ಕೆ ಅದೇ ಸಂಸ್ಕೃತಿಯನ್ನು ಜನರು ತಿಳಿಯದಲೆ ಕಲಿಯು ತ್ತಿರುವರು. ತಾವರಿಯದೆ, ಆ ನುಡಿಯನ್ನು ಕಲಿಯದಿದ್ದವರು ಕೂಡ, ಅದೇ ಸಂಸ್ಕೃತಿಯನ್ನು ದಿನವೊಂದಕ್ಕೆ ಅನುಸರಿಸುತ್ತಿರುವರು. ಈ ವಿಷ ಯವನ್ನು ಸೂಕ್ಷ್ಮವಾಗಿ ನಿರೀಕ್ಷಿಸಿದರೆ ಆದು ನಿಮಗೆ ಕೂಡ ಹೊಳೆಯು ವಂತಿದೆ; ನಿಮ್ಮಲ್ಲಿಯೂ ಪಲ್ಲಟವಾದುದು ಕಂಡುಬರುವುದು!

ನಾ—ಸಾಕು, ಸಾಕು, ಹೆಚ್ಚಿಗೆ ಕೇಳಲಾರೆ. ನನ್ನ ಕಿವಿಯಲ್ಲಿ ಸೀಸು ಕರಗಿಸಿ ಸುರುವಿದಂತಾಗಹತ್ತಿದೆ. ನನಗೇನೂ ತೋಚದ ಹಾಗಾಗಿದೆ. 'ನ ಬುದ್ಧಿಭೇದಂ ಜನಯೇದಜ್ಞಾನಾಂ ಕರ್ಮಸಂಗಿನಾಮ್' ಹಣಮಾ, ಧರ್ಮಾಚರಣೆಯಲ್ಲಿ ಮರಣಪ್ರಾಪ್ತವಾದರೂ ಸಲ್ಲುವುದು; ಪರಧರ್ಮದ ಮಾತು ಬೇಡ!

ಸ್ವಧರ್ಮೇ ನಿಧನಂ ಶ್ರೇಯಃ ಪರಧರ್ಮೋ ಭಯಾವಹಃ ||
ಸ್ವಲ್ಪಮಪ್ಯಸ್ಯ ಧರ್ಮಸ್ಯ ತ್ರಾಯತೇ ಮಹತೋ ಭಯಾತ್ ||

ಎಂದು ಅಂದಕೂಡಲೆ ಹಣಮನು ಮುಲಗಲಿಕ್ಕೆ ಒಳಗೆ ಹೋದನು.

ನಾನು ಆತ್ಮನಿರೀಕ್ಷಣೆಯಲ್ಲಿ ತೊಡಗಿದೆನು—ಬ್ರಾಹ್ಮಣನ ಕರ್ತವ್ಯಗಳೆಂದರೆ, ಅಧ್ಯಯನ, ಅಧ್ಯಾಪನ ಯಜನ ಯಾಜನ, ದಾನ ಪ್ರತಿಗ್ರಹ. ಇವುಗಳಲ್ಲಿ ನನ್ನ ಅಧ್ಯಯನ ಎಂದೋ ನಿಂತುಹೋಗಿದೆ; ಅಧ್ಯಾಪನದ ಮಾತನ್ನು ಎತ್ತುವ ಹಾಗಿಲ್ಲ. ವೈಶ್ವದೇವಬಲಿಹರಣಗಳ ಕಿಂತ ಹೆಚ್ಚಿನ ಯಜನಯಾಜನಗಳನ್ನು ನಾನು ಕೈಕೊಂಡಿಲ್ಲ. ದಾನ ಪ್ರತಿಗ್ರಹಗಳು ಹಾಗೂ ಹೀಗೂ ನಡೆದಿವೆ. ನನ್ನ ಊಟ ಪ್ರತಿನಿತ್ಯ ಪೂರ್ವಾಹ್ಣದಲ್ಲಿ ಅತಿಥಿ ಅಭ್ಯಾಗತರ ದಾರಿಯನ್ನು ನೋಡದಲೆ ನಡೆಯುತ್ತ ಬಂದಿದೆ. ಅಷ್ಟೇಕೆ, ಶ್ರಾದ್ಧ ಪಕ್ಷಗಳೂ ಹಣಮನ ಕಚೇರಿಯ ವೇಳೆಗೆ ಸರಿಯಾಗಿ ಪೂರ್ವಾಹ್ಣದಲ್ಲಿಯೆ ಪೂರ್ತಿಹೊಂದಹತ್ತಿವೆ. ಭಕ್ಷ್ಯಾಭಕ್ಷ್ಯದ ವಿಷಯವನ್ನು ನಿರೀಕ್ಷಿಸಿದರೆ, ಶಾಸ್ತ್ರೋಕ್ತವಾಗಿ ನಿಷಿದ್ಧವಾದ ಪಲಾಂಡು, ಲಶುನ, ಗೃಂಜನ, ವೃಂತಾಕ ಮೊದಲಾದ ಶಾಕಗಳಿಗೆ ಕೈಹಚ್ಚದಿದ್ದರೂ, ಶಾಸ್ತ್ರದಲ್ಲಿ ಕೂಡ ನಿರ್ದಿಷ್ಟವಾಗಿರದ ಬಟಾಟೆಯನ್ನು ರುಚಿಮಾಡಿ ತಿನ್ನುವೆನು. ಉತ್ತರಾದಿ ಮಠದಲ್ಲಿ ಬಹಿಷ್ಕಾರ ಹೊಂದಿದ ಕೇಶರಕ್ಕೆ ಹಬ್ಬಹುಣ್ಣಿವೆಯಲ್ಲಿ ನಮ್ಮ ಮನೆಯೊಳಗೆ ಪಕ್ವಾನ್ನಗಳಲ್ಲಿ ಪ್ರಥಮಸ್ಥಾನ. ಬಳಿಕ ಮಡಿಮೈಲಿಗೆಗಳ ವಿಚಾರ. ಸಂತೆಪೇಟೆಗಳಲ್ಲಿ ಹೋಗಿ ಬಂದ ಮಕ್ಕಳಕೂಡ ನಿರಾತಂಕವಾಗಿ ಬಳಕೆ ಮಾಡುತ್ತಿರುವೆನು. ಮಡಿಯಾಗದ ಮಗಳ ಮೈಲಿಗೆ ಮನೆಯೊಳಗೆ. ಮಡಿವಳನು ಗಂಜಿ ಮಾಡಿ ತಂದಿಟ್ಟ ಗಾದೆಗಳ ಗವುಸಣಿಕೆಯ ಮೇಲೆ

ಹೆಸರಿಗೆ ಕೃಷ್ಣಾಜಿನ ಹಾಕಿ ಕೂಡ್ರುವೆನು. ಸೊಸೆ ಚಹ ಕುಡಿದು ಮಾಡಿದ ಅಡುಗೆಗೆ ದೇವರ ನೈವೇದ್ಯ. ಬಳಿಕ ನನ್ನ ನೈವೇದ್ಯ. ಹಿರಿಯರು ಸ್ಯೂತವಸ್ತ್ರಗಳನ್ನು ಧರಿಸುತ್ತಿರಲಿಲ್ಲ; ದೋತ್ರ ಶಾಲುಗಳನ್ನು ಹೊರುತ್ತಿದ್ದರು. ಕಾಲಲ್ಲಿ ಚರ್ಮದ ಪಾದತ್ರಾಣಗಳನ್ನು ಹಾಕುತ್ತಿರ ಲಿಲ್ಲ. ನಾನು ಶಿಂಪಿಗನಿಂದ ಹೊಲಿಸಿದ ಅಂಗಿಯನ್ನು ತೊಡುತ್ತಿರುವೆನು; ಕಾಲೊಳಗೆ ಮೊಚ್ಚೆ ಹಾಕುವೆನು. ಪತ್ನಿಯ ವಿವಾಹದ ಪೂರ್ವದಲ್ಲಿಯ ಮುಟ್ಟುಗಳನ್ನು ವಿಚಾರಿಸಿದರೆ ನನ್ನ ಮೈ ಜುಮ್ಮೆಂದು ನಡುನಡುಗಿ ತುಂಬ ರೋಮಾಂಚಗಳೇಳುವುವು. ಆಕೆಯ ಪ್ರತಿಯೊಂದು ಕಡೆಗೆಗೆ ಒಂದೊಂದರಂತೆ ನಾನು ಗೈದ ಭ್ರೂಣಹತ್ಯೆಗಳನ್ನು, ಭಕ್ತಾಪ ರಾಧಸಹಿಷ್ಣುವೇ, ಸ್ವಾಮೀ ನರಸಿಂಹಾ, ನೀನೇ ಕ್ಷಮಿಸುವುದು!

ಧರ್ಮವು ಸನಾತನವಲ್ಲವೆಂಬುದು ಅಭದ್ರ. ಆದರಲ್ಲಿ ಬದಲಾ ವಣೆಯಾಗುತ್ತದೆಂಬುವುದು ಅಸಂಭವ. ನಮ್ಮಲ್ಲಿ ಶುದ್ಧತರ್ಕಕ್ಕೆ ಸ್ಥಾನವಿರುವುದಿಲ್ಲವೆಂಬುದು ತಪ್ಪು!

ಪ್ರತಿಜ್ಞೆ—ಧರ್ಮವು ಸನಾತನವಾಗಿದೆ.

ಹೇತು—ಏಕೆಂದರೆ ಧರ್ಮದಲ್ಲಿ ತ್ರಿಕಾಲಜ್ಞಾನವು ಅಡಕವಾಗಿದೆ.

ಉದಾಹರಣೆ—ತ್ರಿಕಾಲಜ್ಞಾನವು ಅಡಕವಾಗಿರುವಲ್ಲಿ ಸನಾತನ ತ್ವದ ವ್ಯಾಪ್ತಿಯಿರುವುದು. ಮನ್ವಾದಿಗಳ ಧರ್ಮಶಾಸ್ತ್ರಗಳೇ ಇದಕ್ಕೆ ಉದಾಹರಣೆ.

ಉಪನಯನ—ಧರ್ಮವು ಸನಾತನತ್ವವ್ಯಾಪ್ಯವಾಗಿ ತ್ರಿಕಾಲ ಜ್ಞಾನವು ಅಡಕವಾದುದಾಗಿದೆ.

ನಿಗಮನ—ಆದುದರಿಂದ ಧರ್ಮವು ಸನಾತನವೆಂಬುದು ಸಿದ್ಧ! ನನ್ನ ಹಿರಿಯರ ಅಭಿಪ್ರಾಯವೂ ಹೀಗೆಯೇ ಇದ್ದುದರಿಂದ ಅದುವೇ ಆಪ್ತವಾಕ್ಯ. ಆದರೂ ವ್ಯರ್ಥ ತೀಕ್ಷ್ಣತೆ ತೋರಿಸುವುದರಲ್ಲಿ ಅರ್ಥ ವಿಲ್ಲೆಂಬುದನ್ನು ಮನಗಂಡ ನನ್ನ ಉಪದೇಶದಲ್ಲಿ ಮರುಕ ಮಾರ್ದವ ಗಳು ತಲೆದೋರತೊಡಗಿದುವು.

# ಶಾಂತಿ ಪರ್ವ

## ೧ ವಾನಪ್ರಸ್ಥ

ಸಂಸಾರದ ಮೋಹವು ಸಾಯುವವರೆಗೆ ಬಿಡುವುದಿಲ್ಲ. ಸಂಸಾರವು ಬೆಳೆಯುತ್ತ ಹೋದ ಹಾಗೆ ಮೋಹಜಾಲವೂ ಅದನ್ನು ಆವರಿಸುತ್ತ ಸಾಗುವುದು. ಆದುದರಿಂದಲೆ ಆ ಮೋಹಕ್ಕೆ ಒಂದು ಮರ್ಯಾದೆಯನ್ನು ಧರ್ಮಶಾಸ್ತ್ರವು ಕಲ್ಪಿಸಿರುವುದು. ಮೈದೊವಲು ಸಡಿಲಿತೆಂದರೆ ದ್ವಿಜರಿಗೆ ವಾನಪ್ರಸ್ಥಾಶ್ರಮವು ಉಕ್ತವಾಗಿದೆ. ನನ್ನ ಷಷ್ಟ್ಯಬ್ಧಿಪೂರ್ತಿಯನ್ನು ತೀರಿಸಿಕೊಂಡು ಸಂಸಾರದ ವ್ಯಾಮೋಹದಿಂದ ಅಲಿಪ್ತನಾಗಿರಬೇಕೆಂದು ಹೆಂಡತಿಯೊಡನೆ ಶೂರ್ಪಾಲಿಗೆ ಹೋಗಬಯಸಿ, ದಿನ ಗೊತ್ತುಪಡಿಸಿದೆನು. ನಾರಾಯಣನಿಗೆ ಅಡುಗೆಯ ಕೋಣೆಯನ್ನು ಕಟ್ಟಿಸಿ ಮನೆಯನ್ನು ಗುಡಿಸಿ ಸಾರಿಸಿ ಸಿದ್ಧಪಡಿಸಬೇಕೆಂದು ಪತ್ರದ ಮೂಲಕ ತಿಳಿಸಿ ಹಣವನ್ನೂ ಕಳುಹಿಕೊಟ್ಟೆನು. ಬತ್ತಲೆಬೂರಕರಿರುವಲ್ಲಿ ಆಗಸನ ಅವಶ್ಯಕತೆಯಿಲ್ಲದ ಹಾಗೆ ಶೂರ್ಪಾಲಿಯಲ್ಲಿ ಬಚ್ಚಲದ ಸ್ಥಿತಿಯಿರುವುದರಿಂದ ಅದನ್ನು ಹೋದ ಬಳಿಕ ಕಟ್ಟಿಸಿದರಾಯಿತೆಂದು ಇಟ್ಟುಕೊಂಡೆನು.

ಹೊರಡಲಿಕ್ಕೆ ಹದಿನೈದು ದಿನಗಳುಳಿದುವು. ಮನೆಯೊಳಗಿನ ವಾತಾವರಣವೇ ಬದಲಾಯಿತು. ತಾಯಿಯ ಮುಂಡೆಯನ್ನಾಶ್ರಯಿಸಿ ತುಂಟತನ ಮಾಡುವ ಮಗುವು ಅವಳ ಅಗಲುವಿಕೆಯ ಬೆದರಿಕೆಗೆ ತೊಂಡನಾಗಿ ಪರಿಣಮಿಸುವಂತೆ ನಮ್ಮ ಸೊಸೆಯ ಬಗೆಯಾಯಿತು. ಹೆಂಡತಿಯು ಅವಳ ಹೊಸ ಹೊಲಬನ್ನರಿತು ಬೆಳಗಾವಿಯಲ್ಲಿಯೆ ಇದ್ದು ಮಗನ ವೈಭವವನ್ನನುಭವಿಸಬೇಕೆಂದು ಹವಣಿಸ ಹತ್ತಿರಬಹುದೆಂದು

ಅನಿಸಿತು. ಅತ್ತೆ ಸೊಸೆಯಂದಿರ ಸಖ್ಯವು ಬಹಳವಾಯಿತು. ಹಣಮನು, 'ಅಪ್ಪಾ, ನಮ್ಮಿಂದ ನಿಮ್ಮ ಧರ್ಮಾಚರಣೆಗೆ ಅಡ್ಡಿಯಾಗುತ್ತಿದ್ದರೆ, ಇನ್ನು ಮುಂದೆ ದಕ್ಷತೆವಹಿಸಿ ನಿಮ್ಮ ನಿಯಮದಂತೆ ಮನೆ ನಡಿಸಲಿಕ್ಕೆ ಸಿದ್ಧನಿರುವೆನು. ಇಷ್ಟು ದಿವಸ ಆದದ್ದಾಯಿತು, ಕ್ಷಮಿಸಿರಿ. ನೀವಿಬ್ಬರೂ ಮುಪ್ಪಿನವರಾಗಿರುವಿರಿ. ನಿಮ್ಮನ್ನಗಲಿ ನನಗೆ ನಿಲ್ಲುವುದು ದುಸ್ಸಹವಾಗುತ್ತದೆ ದಯವಿಟ್ಟು ಹೋಗಬಾರದು,' ಎಂದು ಕಣ್ಣಲ್ಲಿ ನೀರು ತಂದು ಅಂಗಲಾಚಿ ಬೇಡಿಕೊಂಡನು. ಗೋವಿಂದರಾಯರೂ ತುಂಗಾಬಾಯಿಯವರೂ ಆಗ್ರಹಪೂರ್ವಕ ಶೂರ್ಪಾಲಿಗೆ ಹೋಗಬಾರದೆಂದು ಸೂಚಿಸಿದರು. ತಪ್ಪಿಸಿಕೊಂಡ ಕರು ತಾಯಿಯನ್ನು ನೆನೆದು ಧೃತಿಗೆಟ್ಟು ಹುಡುಕುವಂತೆ ನನ್ನ ಹರಣವು ನರಸಿಂಹನೆಡೆಗೆ ಹಾತೊರೆಯ ತೊಡಗಿತು. ಮನಸ್ಸು ಗಟ್ಟಿ ಮಾಡಿ ನನ್ನ ನಿಶ್ಚಯಕ್ಕೆ ಅಂಟಿಕೊಂಡೆನು. ಹೆಂಡತಿಯ ಮನವು ನನ್ನ ಹಾಗು ಮಗನ ನಡುವೆ ಉಯ್ಯಾಲೆಯಂತೆ ಅತ್ತೊಮ್ಮೆ ಇತ್ತೊಮ್ಮೆ ಅಲೆದಾಡುವುದನ್ನು ಕಂಡು ವೈರಾಗ್ಯದ ತತ್ವವನ್ನು ಅವಳ ಮನದಲ್ಲಿ ಪುರಾಣಗಳೊಳಗಿನ ಉದಾಹರಣೆಗಳೊಂದಿಗೆ ಬಿಂಬಿಸಹತ್ತಿದೆನು.

ಒಂದು ದಿನ ಹೆಂಡತಿಯು ಮನೆಯ ಮುಂದಿನ ಹೂವಿನ ಗಿಡಗಳಲ್ಲಿ ತಿರುಗಾಡುತ್ತಿರುವುದನ್ನು ಕಂಡು.

ನಾನು—ಏನೆ, ಇಂದೇನಿದೆ? ಮೈಮೇಲೆ ಇಷ್ಟೇಕೆ ಅಲಂಕಾರಗಳು?

ಹೆಂಡತಿ—ಅಲಂಕಾರಗಳೆಲ್ಲಿಯವು? ಇದ್ದ ಎರಡು ಪಾಟಲಿಗಳನ್ನು ಸೊಸೆಯ ಕೈಯಲ್ಲಿ ಹಾಕಿಬಿಟ್ಟಿದ್ದೇನೆ. ನೀವೇ ಅಂದಿಲ್ಲವೆ, ಶೂರ್ಪಾಲಿಗೆ ವಸ್ತುಗಳನ್ನು ಒಯ್ಯಬಾರದೆಂದು.

ನಾ—ಅಲಂಕಾರಗಳೆಂದರೆ ವಸ್ತುವೊಡವೆಗಳಷ್ಟೇ ಎಂದು ತಿಳಿದಿರುವೆಯೇನು? ವಿಚಿತ್ರವಾದುದಕ್ಕೆ ಅಲಂಕಾರವೆನ್ನಬೇಕೆಂದು ಶಾಸ್ತ್ರವು ಹೇಳುತ್ತದೆ. ಏನೇ, ಕಾಲಲ್ಲಿ ಚಪ್ಪಲಿಯೇಕೆ? ಮೈಯಲ್ಲಿ ಪೋಲಕವೇಕೆ? ಇದು ವಿಚಿತ್ರವಲ್ಲವೇ?

ಹೆಂ—ವಿಚಿತ್ರವೆಂತಹದು. ಹಡೆದಾಗ ಬಾಣಂತಿಯರು ಕಾಲಲ್ಲಿ ಹರಿದ ಮೋಚ್ಚೆ ಚಪ್ಪಲಿಗಳನ್ನು ಹಾಕುವುದಿಲ್ಲವೆ? ಏನೋ, ಪಮ್ಮಿಯು ತಂದಿಟ್ಟ ಚಪ್ಪಲಿಗಳನ್ನು ಮೆಟ್ಟಿದರೆ ಹೇಗೆನ್ನಿಸುವುದೆಂದು ಇಲ್ಲಿಯೆ ತಿರುಗಾಡುತ್ತಲಿದ್ದೇನೆ. ನನ್ನ ಕುಪ್ಪುಸ ಮೈಲಿಗೆಯಾದುದರಿಂದ ಒಂದ ರೆಗಳಿಗೆ ಸೊಸೆಯ ಪೋಲಕ ಹಾಕಿದ್ದೆನು.

ನಾ—ಹೆಂಗಸರಲ್ಲಿ ಯಾವುದೂ ಗಟ್ಟಿಯಿಲ್ಲ. ಅವರಲ್ಲಿ ಧರ್ಮವೂ ಅಷ್ಟೇ, ಅಧರ್ಮವೂ ಅಷ್ಟೇ. ಅವರು ಸಮಾರಂಭಪ್ರಿಯರು. ಪುರಾಣಕ್ಕೆಷ್ಟು ಉತ್ಸಾಹವೋ ಅಷ್ಟೇ ಉತ್ಸಾಹ ಆಟ ನಾಟಕಗಳಲ್ಲಿ. ಧರ್ಮಪ್ರವಚನಗಳಲ್ಲಿ ಅವರ ಗೊಂದಲವಿದ್ದಷ್ಟು ಲೌಕಿಕ ಸಭೆಯ ಲ್ಲಿಯೂ ಇರುವುದುಂಟು. ಮಂದಿರದೊಳಗಿನ ಮೂರ್ತಿಯನ್ನು ಕಾಣಲು ತಂಡತಂಡವಾಗಿ ಹೋಗುವಂತೆ ತಮಾಸೆಗಳಿಗೂ ಗುಂಪು ಕಟ್ಟಿಕೊಂಡು ಮುಗಿಬೀಳುವರು. ಎಲೆ, ನೀನು ನನ್ನ ಸಹ ಧರ್ಮಚಾರಿಣಿ. ನೀನೂ ನನ್ನ ಕೈಬಿಡುವೆಯಾ? ನಡೆ, ಶೂರ್ಪಾಲಿಗೆ ಹೋಗಿ, ನರಸಿಂಹನ ಅಡಿಯಲ್ಲಿ ಸುಖವಾಗಿರುವಾ!

ಶೂರ್ಪಾಲಿಗೆ ಹೊರಡುವ ದಿವಸವು ಉದಯವಾಯಿತು. ಮನೆಯ ಮುಂದೆ ಮೋಟರವು ಬಂದು ನಿಂತಿತು. ತುಂಗಾಬಾಯಿಯ ವರು ಹೆಂಡತಿಯನ್ನು ತಮ್ಮ ಮನೆಗೆ ಕರೆದುಕೊಂಡು ಹೋಗಿ ಉಡಿ ತುಂಬಿ ಅವಳ ಜೊತೆಯಲ್ಲಿಯೆ ಬಂದರು. ಬಳಿಕ ನಾನು ಹೆಂಡತಿ ದಮ್ಮಿಯರು ಹೊರಡಲು ಸಿದ್ಧರಾಗಿ ಒಳಗೆ ಹೋಗಿ ದೇವರಿಗೆ ನಮ ಸ್ಕರಿಸಿ ಪ್ರಾರ್ಥನೆಗೈದು ಹೊರಗೆ ಹೊರಡುವಾಗ ಗೋವಿಂದರಾಯರೂ ತುಂಗಾಬಾಯಿಯವರೂ ನನ್ನ ಪಾದ ಮುಟ್ಟಿ ನಮಸ್ಕರಿಸಿದರು. ಬಳಿಕ ಅಳಿಯನು ನನ್ನ ಕಾಲು ಹಿಡಿದೊಡನೆ ಅವನನ್ನೆಬ್ಬಿಸಿ ಅವನ ತಲೆಯ ಮೇಲೆ ಎರಡೂ ಕೈಯಿಟ್ಟು ಅವನನ್ನು 'ದೀರ್ಘಾಯುಷಿಯಾಗೆಂ'ದು ಹರಸಿದೆನು. ಪಮ್ಮಿಗೆ 'ಅಷ್ಟಪುತ್ರಸೌಭಾಗ್ಯವತೀಭವ' ಎಂದು ಆಶೀ ರ್ವದಿಸಿದೆನು. ಸೊಸೆಯು ನನಗೆ ನಮಸ್ಕರಿಸಿ ಹೆಂಡತಿಯ ಕಡೆಗೆ ಹೋಗಿ ಕಣ್ಣೀರು ಸುರಿಸುತ್ತ ಆಕೆಯ ಪಾದ ಹಿಡಿದು, ದಮ್ಮಿಯನ್ನಪ್ಪಿಕೊಂಡು

ಬಿಕ್ಕಿ ಬಿಕ್ಕಿ ಅಳತೊಡಗಿದಳು. ದಮ್ಮಿಯು ಮಗಳು ರೇವತಿಯನ್ನು ಹಣಮನು ನನ್ನ ಪಾದದ ಮೇಲೆ ಹಾಕಿದೊಡನೆ ನಾನು ಅವಳನ್ನು ಬರಸೆಳೆದು ಬಿಗಿದಪ್ಪಿ ಗದ್ಗದಿತಕಂಠನಾದೆನು. ದಮ್ಮಿಯನ್ನು ಪಮ್ಮಿಸೊಸೆಯಂದಿರಿಂದ ಮರವನ್ನಾಶ್ರಯಿಸಿ ಬಾಳುವ ಬಳ್ಳಿಯನ್ನು ಹಿರಿದು ತೆಗೆಯುವಂತೆ ರಟ್ಟೆಹಿಡಿದು ಒಂದೆರಡು ಹೆಜ್ಜೆ ಮುಂದೆ ಸರಿಸಿದೆನು. ರೇವತಿಯು ಅವಳ ಎರಡೂ ಕಾಲುಹಿಡಿದು ಅಳತೊಡಗಿದಳು. ಹಣಮನು ಆಕೆಯನ್ನೆತ್ತಿಕೊಂಡು, 'ಅಳಬೇಡ ಮಗು, ದಮ್ಮಕ್ಕನು ತಿಂಗಳೆರಡು ತಿಂಗಳಲ್ಲಿ ತಿರುಗಿ ಬರುವಳು. ಆಕೆ ಬರದಿದ್ದರೆ ನಾನೇ ನಿನ್ನನ್ನು ಆಕೆಯ ಕಡೆಗೆ ಕರೆದುಕೊಂಡು ಹೋಗುವೆನು,' ಎಂದು ಸಂತೈಸಿ ಆಕೆಯ ಕಣ್ಣು ತನ್ನ ಉಟ್ಟ ದೋತ್ರದಿಂದ ಒರಸಿದನು. ಹೀಗೆ ಎಲ್ಲಿ ನೋಡಿದಲ್ಲಿ ಕಣ್ಣೀರಿನ ಸುರಿಮಳೆ. ನನ್ನೆದೆಯು ಹಾರ ಹತ್ತಿ ದುಸ್ಸಹ ವೇದನೆಯಾಗಿ ಕೊರಳು ತುಂಬಿಹೋಯಿತು. ಮಾತು ಹೊರಡದಾದುವು. ಕಣ್ಣೀರು ಸುರಿಯಲಾರಂಭಿಸಿತು. ಕರಳು ಕರಳುಗಳ ಅಗಲಿಕೆಯು ಯಾರ ಎದೆಯನ್ನು ತಾನೆ ಕರಗಿಸಲಾರದು! ಮಧ್ವನಿಗೂ ಮೊಮ್ಮಗಳಿಗೂ ಶಾಲೆಗೆ ತಪ್ಪದೆ ಹೋಗಿ ಚೆನ್ನಾಗಿ ಅಭ್ಯಸಿಸುವುದೆಂದು ಹೇಳಿ ಬಂಡಿಯನ್ನೇರಿದೆವು.

ಮಕ್ಕಳು ಮೊಮ್ಮಗಳು ಸೊಸೆಯಂದಿರಿಂದ ತುಂಬಿದ ಮನೆಯನ್ನು ತೊರೆದು ಪದುಮನಾಭನ ಪಾದಗಳೆಡೆಗೆ ಪಯಣ ಬೆಳೆಸಿದೆನು!

* * * * *

ನರಸಿಂಹನ ನಯನಮನೋಹರ ದೇವಾಲಯವು ದೃಷ್ಟಿಗೋಚರವಾದೊಡನೆ ನಾವು ಚಕ್ಕಡಿಯಿಂದಿಳಿದು ದಾರಿಯಲ್ಲಿಯೆ ಸಾಷ್ಟಾಂಗವೆರಗಿ, ಪಾದಚಾರಿಯಾಗಿ ಅದರ ಹಿಂದಿನಿಂದ ಮುಂದೆ ಸಾಗಿದೆವು. ನಮ್ಮ ಮುಂದೆ ಆಚೆಯ ದಂಡೆಯಲ್ಲಿ ಶೂರ್ಪಾಲಿಯ ಮನೆಗಳು ಸಮ್ಮುಖದಲ್ಲಿ ನಿಂತುವು. ನದಿಯಿಳಿದು ಮಳಲಿನಲ್ಲಿ ಮಧ್ಯದವರೆಗೆ ಹೋಗುವಷ್ಟರಲ್ಲಿ ಮಡಿಪಂಚೆಯನ್ನುಟ್ಟ ನಾರಾಯಣನು ನಮ್ಮನ್ನು ನೋಡಿ ಧಾವಿಸಿ ಬಂದನು. ಅವನನ್ನು ನೋಡಿ ನನಗೆ ಹಿಡಿಸಲಾರದಷ್ಟು ಹರ್ಷವಾಯಿತು. ಅವನು ದೂರದಲ್ಲಿರುವಾಗಲೆ, 'ಆಚಾರ್ಯರೆ

ಬಂದಿರಾ, ಎಲ್ಲರು ಕ್ಷೇಮವಾಗಿರುವರೇ?' ಎಂದು ಕೇಳಿದನು. ನಾನು ಒದರಿ 'ಕ್ಷೇಮವಿದೆ. ನೀವು ಕ್ಷೇಮದಿಂದಿರುವಿರಷ್ಟೇ?' ಎಂದುದಕ್ಕೆ ಗೋಣು ಹಾಕಿದನು. ಸಮೀಪಕ್ಕೆ ಬಂದೊಡನೆ ಅವನು ನನ್ನ ಕಾಲು ಹಿಡಿದು ನಮಸ್ಕರಿಸಿದನು. ನನ್ನ ಗುರು, ನನ್ನ ಬಲಗೈ, ನನ್ನ ಬಾಲ ಮಿತ್ರನಾದ ನಾರಾಯಣನನ್ನು ಪ್ರೀತಿಯಿಂದ ನನ್ನೆದೆಗಪ್ಪಿಕೊಂಡು, ಕೈಹಿಡಿದು ಚಕ್ರತೀರ್ಥದವರೆಗೆ ಸಾಗಿ, ಅಲ್ಲಿ ಕೈಕಾಲು ಮುಖ ತೊಳೆದು ಬಾಯಿ ಮುಕ್ಕಳಿಸಿಕೊಂಡು ನದಿ ದಾಟಿ, ದೇವಸ್ಥಾನವನ್ನು ಒಳಹೊಕ್ಕು, ಲಕ್ಷ್ಮೀನರಸಿಂಹನ ಮೂರ್ತಿಯನ್ನು ಕಣ್ತುಂಬ ನೋಡಿ, ಕೈಮುಗಿದು ಸಾಷ್ಟಾಂಗವೆರಗಿ ಪ್ರದಕ್ಷಿಣೆ ಹಾಕಿ, ಒಂದರೆಗಳಿಗೆ ಅಲ್ಲಿಯೆ ಕುಳಿತು ಮನೆಗೆ ಹೋದೆನು.

ನನ್ನ ಹೊಸ ದಿನಚರಿಯು ಪ್ರಾರಂಭವಾಯಿತು. ಪ್ರಾತರಾಹ್ನಿಕ ವಾದ ಬಳಿಕ ಪುರಾಣ, ಆಮೇಲೆ ಗಲಗಲಿಯ ಆಚಾರ್ಯರ ಹತ್ತಿರ ಹೋಗಿ ಮೋದತೀರ್ಥರ ಗ್ರಂಥಗಳ ಪಾಠ ಕೇಳುವುದು. ಈ ನಿಷ್ಠುರ ಕ್ರಮವು ಸಮಗ್ರವಾಗಿ ಆರು ತಿಂಗಳು ಸಾಗಿತು. ಹಣಮನು, ಮಾವ ಲೇದಾರನಾಗಿ ಖಾನಾಪುರಕ್ಕೆ ಹೋಗುವ ಮುಂದೆ ಮನೆಯವರೆಲ್ಲರನ್ನೂ ಕರೆದುಕೊಂಡು ಬಂದನು ಹೆಂಡತಿಯು ನರಸಿಂಹನಿಗೆ ಯಥೋಚಿತ ವಾಗಿ ಹರಕೆ ಮುಟ್ಟಿಸಿದಳು. ಬಳಿಕ ಹಣಮನ ಜೊತೆಗೆ ಹೆಂಡತಿ ದಮ್ಮಾ ಯರು ಹೋಗಿ ತಿಂಗಳೊಪ್ಪತ್ತು ನಿಂತು ಬಂದರು. ನನ್ನ ಪಾಠವು ನಿರ್ವಿಘ್ನವಾಗಿ ಮುಂದೆ ನಡೆಯಿತು.

## ೨ ತೀರ್ಥಯಾತ್ರೆ

ಊರವರು ಕಾಶಿ ಬದರಿಗಳಿಗೆ ಹೊರಡುವುರೆಂದು ತಿಳಿದ ಕೂಡಲೆ ನಾವೂ ನಾರಾಯಣನನ್ನು ಕರೆದುಕೊಂಡು ಹೊರಟೆವು ನಾಶಿಕ ಪ್ರಯಾಗ ಕಾಶಿ ಗಯೆಗಳ ಯಾತ್ರೆ ತೀರಿಸಿಕೊಂಡು ಅಯೋಧ್ಯೆಯಲ್ಲಿ ಳಿದು ಹರಿದ್ವಾರಕ್ಕೆ ಹೋದೆವು. ನಮಗೆ ಬೇಕಾದ ಪದಾರ್ಥಗಳನ್ನು ಕೊಂಡು ಬದರಿಕಾಶ್ರಮಕ್ಕಾಗಿ ಶೈಲವನ್ನು ಸೇರಿದೆವು. ನಾರಾಯಣನ ದರ್ಶನ ತೆಗೆದುಕೊಂಡು ಮರಳಿ ದಾರಿಯಲ್ಲಿ ಮಥುರೆವೃಂದಾವನಗಳನ್ನು

ಸಂದರ್ಶಿಸಿ ಪಂಢರಪುರದ ಮಾರ್ಗವಾಗಿ ಶೂರ್ಪಾಲಿಗೆ ಬಂದೆವು. ಮುಂದೆ ಎರಡು ತಿಂಗಳು ವಿಶ್ರಮಿಸಿ ತಿರುಪತಿ ರಾಮೇಶ್ವರಗಳ ಯಾತ್ರೆಗಳನ್ನೂ ಮುಗಿಸಿಕೊಂಡು ಬಂದೆವು.

ಅನೇಕ ದೇಶಗಳಲ್ಲಿ ತಿರುಗಾಡಿ ಬಂದ ನನ್ನಲ್ಲಿ ಹೊಸ ಕಲ್ಪನೆಗಳು ಬರತೊಡಗಿದುವು. ನನ್ನ ಪಾಠವೂ ಕೂಡ ಮಾರ್ಪಟ್ಟಿತು. ನಾನು ಆಚಾರ್ಯರಿಗೆ ಪ್ರಶ್ನೆ ಕೇಳುವೆನು; ಶಂಕೆಗಳನ್ನು ಸೂಚಿಸುವೆನು; ಅವರು ಉತ್ತರ ಕೊಡುವರು. ಕ್ಷಿತಿಜವು ಸಮೀಪದಲ್ಲಿಯೆ ಇರುವುದೆಂದು ತಿಳಿದ ಬಾಲಕನು ಮರವನ್ನೇರಿ ನೋಡಿದ ಕೂಡಲೆ ಅದು ಬಹು ದೂರದಲ್ಲಿರುವುದೆಂದು ಮನಗಾಣುವಂತೆ, ಇಷ್ಟು ದಿನ ನನ್ನ ಬೆನ್ನ ಹಿಂದೆ ಇರುವುದೆಂದು ತಿಳಿದ ಪರಮತತ್ವವು ದೂರದೂರ ಸರಿಯುತ್ತಿರುವುದನ್ನು ಕಂಡು ನಾನು ಆ ಮಾರ್ಗವನ್ನು ಬದಿಗಿರಿಸಿ ಸುಲಭಮಾರ್ಗವಾದ ಭಕ್ತಿಯ ದಾರಿಯನ್ನು ಹಿಡಿದೆನು. ಹಣಮನು ನಾರಾಯಣನ ಮಗನಿಗೆ ಕೆಲಸ ಹಚ್ಚಿಕೊಟ್ಟುದರಿಂದ ಅವನಿಗೆ ನನ್ನ ಜೊತೆಯಲ್ಲಿಯೆ ಇರಲಿಕ್ಕೆ ಅನುಕೂಲವಾಯಿತು.

ನಾರಾಯಣನು ದಾಸರ ಪದಗಳನ್ನು ಹಾಡುವನು. ನಾನು ಕೇಳುವೆನು. ಹರಿಕಥಾಮೃತಸಾರ ಗ್ರಂಥವನ್ನು ಇಬ್ಬರೂ ಪಠಿಸಿದೆವು. ಶ್ರೀಪಾದರಾಯರು, ರಾಯರು, ರಾಜರು, ಪುರಂದರ ಜಗನ್ನಾಥದಾಸರಂತಹ ವಿದ್ವಾಂಸರು ಕನ್ನಡದಲ್ಲಿ ಉಸಿರಿದ ತತ್ವಗಳನ್ನು ತಿಳಿದು ಧನ್ಯರಾದೆವು. ನನ್ನಲ್ಲಿ ಕನ್ನಡದಲ್ಲಿಯೂ ಪ್ರೇಮವು ಬಳೆಯಲಾರಂಭಿಸಿ ಕೆಲವೆಡೆ ಸಂಸ್ಕೃತದ ಬದಲಾಗಿ ಕನ್ನಡ ಶಬ್ದಗಳನ್ನೇ ಉಪಯೋಗಿಸಬೇಕೆಂಬ ಮೋಹವು ಬರತೊಡಗಿತು. ನನ್ನ ಮಾತಿನಲ್ಲಿ ಇಷ್ಟುದಿವಸ ಸಂಸ್ಕೃತದಲ್ಲಿ ಕನ್ನಡವನ್ನು ಬೆರಿಸುವ ಪರಿಪಾಠವಿದ್ದಿತು. ಈಗ ಕನ್ನಡದಲ್ಲಿ ಸಕ್ಕದವನ್ನು ಬೆರಿಸುವೆನು.

ಮಧ್ವನು ಪುಣೆಯಲ್ಲಿ ಒಕ್ಕಲುತನ ಕಲಿಯುವ ಕಾಲೇಜಿಗೆ ಹೋಗಿ ಒಂದು ವರ್ಷವಾಯಿತು. ರೇವತಿಯು ದೊಡ್ಡವಳಾದುದರಿಂದ ಅವಳನ್ನು ಮಧ್ವನಿಗೆ ತೆಗೆದುಕೊಂಡು ಮದುವೆ ಮಾಡುವುದು ಗೊತ್ತಾ

ಯಿತು. ಹಣಮನು, ವೆಂಕಟರಾಯರು ರಾಮರಾಯರ ಮನೆಯವ ರನ್ನೂ ಭೀಮ ಅವನ ಹೆಂಡತಿ ಮೊದಲಾದವರನ್ನೂ ಕರೆದುಕೊಂಡು ಬಂದನು. ಲಗ್ನವೂ ಮುಗಿಯಿತು. ಸೇಸೆದಳೆದುದೊಂದೇ ನನ್ನ ಕೆಲಸ! ಹಣಮನು ಹುಕ್ಕೇರಿಗೆ ಕೆಲಸವಾದುದರಿಂದ ಹೊರಟು ಹೋದನು. ಭೀಮನು ತನ್ನ ಜವಳಿಯ ಅಂಗಡಿಗಾಗಿ ಕಪ್ಪಡ ಕೊಳ್ಳಲು ಮುಂಬ ಯಿಗೆ ಹೋದನು. ಉಳಿದವರು ಹದಿನೈದು ದಿವಸ ನಿಂತು ಮರಳಿದರು.

## ೩ ವೈಷ್ಣವದೀಕ್ಷೆ

ಬಹುದಿವಸಗಳ ನಂತರ ಸ್ವಾಮಿಗಳು ಶೂರ್ಪಾಲಿಗೆ ಬಿಜಯಂಗೈಸಿ ದರು. ಊರವರು ಅವರನ್ನು ಕರೆದುಕೊಂಡು ಬಂದರು. ಮಠವು ಗುಡಿಯಲ್ಲಿಯೆ ಬೀಡುಬಿಟ್ಟಿತು. ಪೂಜೆಗೆ ಪ್ರಾರಂಭವಾಯಿತು. ಸೀತಾರಾಮಚಂದ್ರರ ಮೂರ್ತಿಗಳನ್ನು ನೋಡಿ ನನ್ನ ಕಣ್ಣುಗಳು ಧನ್ಯವಾದುವು. ತೀರ್ಥಪ್ರಸಾದಗಳನ್ನು ತೆಗೆದುಕೊಂಡು ಪಾವನನಾಗ ಬೇಕೆಂದು, ಗೊಂದಲವು ಕಡಿಮೆಯಾಗುವುದರ ದಾರಿಯನ್ನು ನೋಡಿ, ತೀರ್ಥಕ್ಕೆ ಕೈಯೊಡ್ಡಲು ಮುಂದುವರಿದೆನು. ಅಷ್ಟರಲ್ಲಿ 'ದಬ್ಬಿರಿ, ದಬ್ಬಿರಿ' ಎಂಬ ದನಿ ಕೇಳಬರಲು ಗಾಬರಿಯಾಗಿ ಸುತ್ತುಮುತ್ತು ನೋಡಿದೆನು. ನಾರಾಯಣನು ನನ್ನ ಕಿವಿಯಲ್ಲಿ, 'ನೀವು ಮನೆಗೆ ಹೋಗಿರಿ; ತೀರ್ಥವನ್ನು ತಂದು ಕೊಡುವೆನು' ಎಂದನು. ಮನೆಯ ವರೆಲ್ಲರು ನನ್ನ ಜೊತೆಯಲ್ಲಿ ತಿರುಗಿ ಬಂದರು. ನಾನು 'ಹರಿ, ಹರಿ, ನನ್ನ ಪಾಪಗಳು ಇನ್ನೂ ಮುಗಿದಿರುವುದಿಲ್ಲವೆ. ಗುರುಗಳ ಅನುಗ್ರಹ ವಿಲ್ಲದೆ ಹೋಯಿತು. ಈ ದೇಹವು ಅಂಕನವನ್ನೆಂದು ಕಾಣುವುದು' ಎಂದು ತಲೆ ಹಿಡಿದುಕೊಂಡು ಕುಳಿತೆನು. ನಾರಾಯಣನು ತೀರ್ಥ ತಂದು ಕೊಟ್ಟನು. ನಾನು 'ನಾರಾಯಣಾ ಇನ್ನೇನು ಗತಿ' ಎಂದು ಕೇಳಿದುದಕ್ಕೆ ಅವನು, 'ವ್ಯಸನಪಡಬೇಡಿರಿ. ಇದು ಊರೊಳಗಿನ ಕೆಲ ಜನರ ಕುಚೋದ್ಯ. ಗುರುಗಳ ಅನುಗ್ರಹವು ಅವಶ್ಯವಾಗಿ ಆಗುವುದು' ಎಂದು ಹೇಳಿ ಹೋದನು. ಅದನ್ನು ಕೇಳಿ ರೇವತಿಯು—'ಅಜ್ಜಾ, ಸುಮ್ಮನೆ ಏಕೆ ಮರುಗುವಿರಿ. ಸ್ವಾಮಿಗಳು ಬರದಿದ್ದರೆ ಹಣವುಳಿಯು

ವುದು;' ವ್ಯೈಸುಡುವುದೂ ಉಳಿಯುವುದು.' ನಾನು, 'ಹಾಗೆನ್ನಕೂಡದು, ಮಗು. ಗುರುಗಳಿಗೆ ಭಿಕ್ಷೆ ಸಲ್ಲಿಸುವುದು ಗೃಹಸ್ಥನ ಕರ್ತವ್ಯ. ವೈಷ್ಣವ ದೀಕ್ಷೆಗೆ ಆವಶ್ಯಕವಾದ ತಪ್ತಮುದ್ರೆಯ ಅಂಕನವಿಲ್ಲದಿದ್ದರೆ ಈ ದೇಹದ ಸಾರ್ಥಕ್ಯವೆಲ್ಲಿಯದು! ಮಗು ರಾಗದ ಪೆಟ್ಟಿಗೆಯ ಮೇಲೆ, 'ಧರ್ಮವೇ ಜಯವೆಂಬ ದಿವ್ಯಮಂತ್ರ' ಎಂಬ ಪದಹೇಳು ನೋಡುವಾ. ಅಡುಗೆ ಯಾಗುವವರೆಗೆ ಸುಮ್ಮನೆ ಕುಳಿತು ಏನು ಮಾಡುವುದು?' ಎಂದೆನು. ರೇವತಿಯು ಹಾಡತೊಡಗಿದಳು,

**ಕಾಂಬೋಧಿ ರಾಗ ಝಂಪೆತಾಳ.**

ಧರ್ಮವೇ ಜಯವೆಂಬ ದಿವ್ಯಮಂತ್ರ।
ಮರ್ಮವನು ತಿಳಿದು ಆಚರಿಸುವುದು ಕೇಳು॥ ॥ಪ॥

ವಿಷವನುಣಿಸಿದವಗೆ ಷಡ್ರಸವನುಣಿಸಲು ಬೇಕು।
ಅಸೂಯೆ ಪಡುವವನ ಪೋಷಿಸಲು ಬೇಕು॥
ಹುಸಿದು ಮನೆಕೊಂಬುವನ ಹಾಡಿ ಹರಸಲು ಬೇಕು।
ಅಸಿಯಲಿರಿದವನ ಮಗನ್ನೆ ಸರಿಡಲು ಬೇಕು॥ ॥೧॥

ಎಂದಿಗೂ ಸೇರದವನ ಹಾಡಿಪರಸಲು ಬೇಕು।
ಕೊಂದವನ ಗೆಳೆತನವ ಮಾಡಬೇಕು॥
ಒಂದೆ ನಿಂದಿಸುವವನ ವಂದಿಸುತ್ತಿರಬೇಕು।
ಬಂಧನದೊಳಿಟ್ಟವನ ಬಿಡಿಸಬೇಕು॥ ॥೨॥

ಕೊಂಡೊಯ್ದು ಕೊಲಿಸುವರ ಕೊಂಡಾಡುತಿರಬೇಕು।
ಕಂಡರಾಗದವನ ಹೊಗಳಬೇಕು॥
ಕಂಡು ಭಜಿಸಿರೊ ನಮ್ಮ ಪುರಂದರ ವಿಠಲನ್ನ।
ಅಖಂಡಮಹಿಮೆಯನರಿತು ಅರಿಯದಿರಬೇಕು॥ ॥೩॥

ಅಷ್ಟರಲ್ಲಿ ನಾರಾಯಣನು ಇಬ್ಬರು ಶಿಷ್ಯರನ್ನು ಕರೆದುಕೊಂಡು ಬಂದನು. ಅವರು ನನಗೆ 'ನಿಮ್ಮ ಮಗನು ಕರ್ಹಾಟಕುಲದವಳನ್ನು ಮದುವೆಯಾಗಿರುವನು. ಅವಳನ್ನು ಕರೆದು ತಂದು ನಿಮ್ಮ ಮನೆ ಯಲ್ಲಿ ಕೂಡಿಕೊಂಡು ಇದ್ದಿರಿ?' ಎಂದು ಕೇಳಿದುದಕ್ಕೆ, ನಾನು— 'ಅಹುದು. ಆದರೆ ಆಕೆಗೆ ನಮ್ಮ ಅಡುಗೆಯ ಮನೆಯನ್ನು ಸೇರಕೂಡ

ದೆಂದು ಕಟ್ಟುಮಾಡಿದ್ದನು.' ಅವರು, 'ನಿಮ್ಮ ಅಪರಾಧ ಸಿದ್ಧವಾಯಿತು. ಮನೆಯ ಸೊಸೆಯು ಅಡುಗೆಯ ಮನೆ ಸೇರಿಲ್ಲವೆಂಬುದನ್ನು ಕೇಳಿ ಯಾರಾದರೂ ನಗಬಹುದು! ಇದಕ್ಕೆ ಪಂಚಶತರೂಪ್ಯಕಪ್ರಾಯಶ್ಚಿತ್ತ' ಎಂದರು. ಬಳಿಕ ನಾರಾಯಣನು ವಸ್ತುಸ್ಥಿತಿಯನ್ನು ವಿಶದಪಡಿಸಿ, ಮುನ್ನೂರು ರೂಪಾಯಿ ಭಿಕ್ಷೆಗೆ ಕೊಡುವುದನ್ನು ಗೊತ್ತುಪಡಿಸಿದನು. ಗುರುಗಳಿಗೆ ಔತಣ ಕೊಡುವುದಕ್ಕಾಗಿ ಗುಡಿಗೆ ಹೋಗಿ ಅವರ ಮುಂದೆ ಕಾಯಿ ಇರಿಸಿ ನಮಸ್ಕರಿಸಿದೆವು. ಶಿಷ್ಯರು ಅವರಿಗೆ ನನ್ನ ಪರಿಚಯ ಮಾಡಿಕೊಟ್ಟರು. ಸ್ವಾಮಿಗಳವರು, 'ನೀವು ಅಶ್ವತ್ಥಾಚಾರ್ಯರ ಮಕ್ಕಳೇ. ಅಶ್ವತ್ಥಾಚಾರ್ಯರು ನಮ್ಮ ಹಿರಿಯರ ಸಹಪಾಠಿಗಳು. ಮಠದಲ್ಲಿ ಅವರ ಸುಧಾಪಾಠವನ್ನು ಕೇಳಿರುವೆನು. ಯೋಗ್ಯ ಬ್ರಾಹ್ಮಣರು' ಎಂದು ನುಡಿದು ಸುಮ್ಮನಾದರು. ಮರಳಿ ಬಂದೊಡನೆ ಹೆಂಡತಿಯು ಊರಿಗೆ ಔತಣ ಕೊಡಲಿಕ್ಕೆ ಎಬ್ಬಿಸತೊಡಗಿದಳು, ನಾನು, 'ಮಠ ಬಂದಿತೆಂದರೆ ಊರ ಒಲೆಗಳಿಗೆ ರಂಗವಲ್ಲಿ! ಆಮಂತ್ರಣ ಕೊಡುವುದು ಸನಾತನ ಸಂಪ್ರದಾಯವಲ್ಲವೆಂ' ದು ಹೇಳಿ ಔತಣ ಕೊಡಲಿಲ್ಲ.

ಮರುದಿನ ಮುಂಜಾವಿನಲ್ಲಿ ಪಾದಪೂಜೆಗಾಗಿ ಗುರುಗಳನ್ನು ಕರೆದುಕೊಂಡು ಬಂದೆವು. ಮುದ್ರೆ ಕಾಸುವ ಶಿಷ್ಯನಿಗೆ ಕೊಂಚ ಹೆಚ್ಚು ಕಾಸಲು ಸೂಚಿಸಿದೆನು. ಅದನ್ನು ಕಂಡು ರೇವತಿಯು ಅಂಜಿ ಅಡುಗೆಯ ಮನೆಯಲ್ಲಿ ಅಡಗಿಕೊಂಡಳು. ನಾನು ಮೊದಲು ನಿಂತು ಪಂಚತಪ್ತಮುದ್ರೆಗಳನ್ನು ಧರಿಸಿದೆನು. ಹೆಂಡತಿಯು ನಡುಗುತ್ತ ಕೈ ಮುಂದೆ ಮಾಡಿದಳು. ದಮ್ಮಯ್ಯ ಹೆದರದೆ ರಟ್ಟೆ ಮುಂದೆ ಚಾಚಿದಳು. ನಾನೂ ಹೆಂಡತಿಯೂ ರೇವತಿಯನ್ನು ಎಳೆದು ತಂದು ಮುದ್ರೆ ಕೊಡಿಸಿದೆವು!

ಪೂಜೆಯಾಯಿತು; ತೀರ್ಥವಾಯಿತು; ಹಿಂದಿನ ದಿವಸೆರಡು ದಿವಸ, 'ಅಲ್ಲಿ ಬಂದಿತು, ಇಲ್ಲಿ ಬರಲಿಲ್ಲ' ಎಂಬ ಗೊಂದಲವಾಗದೆ ಸರ್ವತ್ರಪರಿಪೂರ್ಣವಾಗಿ ಭೋಜನವಾಯಿತು! ನನ್ನ ದೇಹದೊಳಗಿನ ಪಾಪಗಳು ಸುಟ್ಟು ಹೋದುವು! ವಿಷ್ಣುರಹಸ್ಯ ಪುರಾಣದಲ್ಲಿ ಹೇಳಿದಂತೆ ನನ್ನ ವೈಷ್ಣವದೀಕ್ಷೆಯು ಪರಿಪೂರ್ಣವಾಯಿತು !!

# ೪ ಬಿನ್ನಹ

ಮುಪ್ಪು ಆವರಿಸಿತು. ದೇಹಯಷ್ಟಿಯು ಜರ್ಜರಿತವಾಗಿ ವಯದ ಭಾರದಿಂದ ಬೊಗ್ಗಿ ಕುಗ್ಗಿತು. ಗತಿಯು ಕುಂಠಿತವಾಯಿತು. ಹಲ್ಲುಗಳುದುರಿದುವು. ದೃಷ್ಟಿಯು ಮಂಜುಮಂಜಾಯಿತು. ಮನೆ ಮೊಸಲಾಗುವ ಬಾರಿಯೂ ಬಂದೊದಗಿದೆ.

ಈ ಭವಸಾಗರದಲ್ಲಿ ನಾನು ಅನೇಕ ಕಷ್ಟನಷ್ಟಗಳನ್ನು ಅನುಭವಿಸಿರುವೆನು. ನರಸಿಂಹನ ಅನುಗ್ರಹದಿಂದ ಈ ಮಟ್ಟಿಗೆ ಬಂದು ತಲುಪಿರುವೆನು. ವರ್ತಮಾನ ಭವಿಷ್ಯಗಳು ಅವನನ್ನೇ ಕೂಡಿವೆ. ಗಿರಿಶಿಖರವನ್ನೇರಬಯಸುವ ದಾರಿಕಾರನು, ನಡೆದು ಬಸವಳಿದು ದಣುವಾರಿಸಿಕೊಳ್ಳುವಾಗ, ಸುತ್ತಣ ಸೃಷ್ಟಿಯಲ್ಲಿ ದೃಷ್ಟಿಯನ್ನೊಗೆದು ತಾನೇರಿಳಿದ ಗಿರಿಕಂದರಗಳು, ದಾಟಿದ ಕೆರೆ ತೊರೆಗಳು, ತುಳಿದ ಸುಳಿದಾರಿ ಇವುಗಳನ್ನು ಕಂಡು ವಿಸ್ಮಯಬಡುವಂತೆ, ನಾನು ಪರಲೋಕಯಾತ್ರೆಗಾಗಿ ಹೊರಟು ಬಳಲಿ ಬಾಯಾರಿ ಮನಸ್ಸಿನ ಸಮಾಧಾನಕ್ಕಾಗಿ ನನ್ನ ಜೀವನಯಾತ್ರೆಯನ್ನು ನಿರೀಕ್ಷಿಸಿ ಈ ಆಖ್ಯಾಯಿಕೆಯನ್ನು ಆಯಾ ಕಾಲ ಭಾವ ಸನ್ನಿವೇಶಗಳಿಂದ ಹೇಳಿರುವೆನು. ಕತೆಯು ಬೋಧಪ್ರದವಾಗಿರಲಿಕ್ಕಿಲ್ಲ. ಅದರಿಂದ ನನ್ನ ಬಾಂಧವರ ಮನೋರಂಜನೆಯಾದರೆ ಸಾಕು! ಇನ್ನೊಂದು ಆಶೆ ಉಳಿದಿದೆ. ಅಕಟಕಟಾ, ನರಸಿಂಹಾ, ಮಾನವನ ಆಶೆಗೆ ಕೊನೆಯಿಲ್ಲವಲ್ಲ! ಇದುವೆ ನನ್ನ ಕೊನೆಯಾಸೆಯನ್ನು ಇಲ್ಲವೆ ಮೃತ್ಯುಲೇಖವೆನ್ನು—

'ಸಾತಪ್ಪನ ಮಗನು ಮಾರಲಿಕ್ಕೆ ತೆಗೆದ ನಮ್ಮ ಪೂರ್ವಾರ್ಜಿತ ಹೊಲವನ್ನು ಹಣಮನು ತಿರುಗಿಕೊಳ್ಳುವುದು. ನಾನು ಹೆಂಡತಿ ಇಬ್ಬರೂ ಅದರಲ್ಲಿ ಗಿಡದಡಿಯಲ್ಲಿ ಗುಡಿಸಲು ಕಟ್ಟಿಕೊಂಡು ಇರುವುದು. ರೇವತೀರಮಣನು ತನ್ನ ಶಿಕ್ಷಣವನ್ನು ತೀರ್ಕಣಿಸಿ, ಹಲಾಯುಧನಾಗಿ ನಮ್ಮ ಹಾಗು ದಮ್ಮಿಯ ಹೊಲಗಳಲ್ಲಿ, ನಾಲ್ಕು ಎತ್ತು ಕಟ್ಟಿ ಒಕ್ಕಲುತನ ಮಾಡಿಕೊಂಡು, ನಮ್ಮ ಕುಲಾಚಾರಗಳನ್ನು ಸಾಗಿಸುತ್ತಿರುವುದು.'

# ೫ ಭಕ್ತಿ

ಭಗವದ್ಭಕ್ತಿಯೇ ಸಕಲಶಾಸ್ತ್ರಗಳ ಸಾರ. ಆದುದರಿಂದ ಈ ಎಲುವಿನ ಕೊಂಪೆಗೆ ಬೆಂಕಿ ಹತ್ತುವುದರೊಳಗಾಗಿ ಭಾಗವತನಾಗಿ ಬಾಳುವುದು. ಶ್ರೀಹರಿಯು ಸುಲಭನು. ಅವನನ್ನುದ್ದೇಶಿಸಿ ಮುಳುಗಿ ಪರಮಾದರದಿಂದ ಹಾಡಿದರೆ, ಕುಳಿತು ಕೇಳುವನು; ಕುಳಿತು ಹಾಡಿದರೆ, ನಿಂತು ಕೇಳುವನು; ನಿಂತು ಹಾಡಿದರೆ ನಲಿಯುತ್ತ ಕೇಳುವನು; ನಲಿದರೆ ಒಲಿಯುವನು! ಹಲವು ಬಗೆಯಿಂದ ಶ್ರೀಹರಿಯನ್ನು ಮನದಲ್ಲಿ, ಒಲಿಸಿ ನಿಲ್ಲಿಸುವುದು. ಮಕ್ಕಳಾಡಿಸುವಾಗ, ಮಡದಿಯೊಳು ಅಕ್ಕರದಿಂದ ನಲಿಯುವಾಗ, ಬಗೆಬಗೆಯ ವಾಹನಗಳೇರಿ ಮೆರೆಯುವಾಗ, ಬಿಕ್ಕುವಾಗ ಆಕಳಿಸುವಾಗ, ಮಲಗುವ ಗ ಏಳುವಾಗ, ಮಾತಾಡುವಾಗ ಕೆಲಸ ಮಾಡುವಾಗ, ಮೈದೊಳೆಯುವಾಗ ಮೆಲುವಾಗ, ಜಗಕ್ಕೆಲ್ಲ ಅಪ್ರತಿಮಲ್ಲನಾದವನನ್ನು ನೆನೆಯುತ್ತಿರುವುದು. ಭಾಗವತಧರ್ಮವು ಜಾತಿಗೊತ್ತುಗಳನ್ನು ಮಿಕ್ಕಿ ನಿಂತಿರುವುದು! ಆವ ಕುಲದವನಾದರೇನು? ಆವ ದೇಶದಲ್ಲಿದ್ದರೇನು? ಆವ ಕರ್ಮವನ್ನು ಕೈಕೊಂಡರೇನು? ಪರಮಾತ್ಮನನ್ನು ಭಜಿಸುವ ಮಾನವನಿಗೆ ಸುಖದುಃಖಾದಿ ದ್ವಂದ್ವಗಳು ಬಾಧಿಸಲಾರವು. ದೇಹ ಕೊಟ್ಟ ಹರಿಯು ಅವರವರ ಆಹಾರವನ್ನೂ ಕಲ್ಪಿಸಿಯೇ ಇಟ್ಟಿರುವನು. ನರಸಿಂಹನೇ ನಮ್ಮಲ್ಲಿ ನೆಲಿಸಿ ಸಕಲವ್ಯಾಪಾರಗಳನ್ನು ಮಾಡಿ ಮಾಡಿಸುತ್ತಿರುವನು. ಕಾರಣ ಅವನೇ ಕರ್ತೃವೆಂದು ತಿಳಿದು ಅವನ ಕೈಂಕರ್ಯವನ್ನಂಗೀಕರಿಸಿ ಎಲ್ಲವನ್ನು ಅವನಿಗೆಯೇ ಅರ್ಪಿಸಿ ಹರಿಯ ದಾಸನಾಗಿ ಸುಖಿಸುವುದು।

ಶ್ರೀಮದಾನಂದತೀರ್ಥರು ದ್ವಾದಶಸ್ತೋತ್ರದಲ್ಲಿ ಅನ್ನುವುದು:—

ಶೃಣುತಾಮಲಸತ್ಯವಚಃ ಪರಮಂ ಶಪಥೇರಿತಮುಚ್ಛ್ರಿತಬಾಹುಯುಗಂ।
ನ ಹರೇಃ ಪರಮೋ ನ ಹರೇಃಸದೃಶ: ಪರಮಃಸತು ಸರ್ವಚಿದಾತ್ಮಗಣಾತ್॥
ಕುರು ಭುಂಕ್ಷ್ವ ಚ ಕರ್ಮ ನಿಜಂ ನಿಯತಂ ಹರಿಪಾದವಿನಮ್ರಧಿಯಾ ಸತತಂ।
ಹರಿರೇವ ಪರೋ ಹರಿರೇವ ಗುರುರ್ಹರಿರೇವ ಜಗತ್ಪಿತೃಮಾತೃಗತಿಃ॥
ನತತೋಽಸ್ತ್ಯಪರಂ ಜಗದೀಡ್ಯತಮಂ ಪರಮಾತ್ಪರತಃ ಪುರುಷೋತ್ತಮತಃ॥
ತದಲಂ ಬಹುಲೋಕವಿಚಿಂತನಯಾ ಪ್ರವಣಂ ಕುರು ಮಾನಸಮೀಶಪದೇ॥
ಯತತೋಽಪಿ ಹರೇ: ಪದಸಂಸ್ಮರಣೇ ಸಕಲಂ ಹ್ಯಘಮಾಶುಲಯಂ ವ್ರಜತಿ।
ಸ್ಮರತಸ್ತು ವಿಮುಕ್ತಿಪದಂ ಪರಮಂ ಸ್ಫುಟಮೇಷ್ಯತಿ ತತ್ಕಿಮಪಾಕ್ರಿಯತೇ॥

ಹರಿಃ ಓಂ

# ತಿದ್ದುಪಡಿ.

| ಅಶುದ್ಧ | ಶುದ್ಧ | ಪುಟ | ಸಾಲು |
|---|---|---|---|
| ಪಾಪಿಷ್ಟ | ಪಾಪಿಷ್ಠ | ೩, ೮೯ | ೨, ೧ |
| ಉಗೆಬಂಡೆ | ಉಗಿಬಂಡಿ | ೩ | ೧೦ |
| ನೀರಿನಿ | ನೀರಿನ | ೬ | ೨೪ |
| ಪಡೆಯುವೆನು | ಪಡೆಯುವನು | ೧೩ | ೧೨ |
| ಹೂರಣನ್ನು | ಹೂರಣವನ್ನು | ೧೩ | ೧೩ |
| ಶಾಂಬೂಲ | ತಾಂಬೂಲ | ೧೩ | ೨೦ |
| ಸಮ್ಮನಿದ್ದರೂ | ಸುಮ್ಮನಿದ್ದರೂ | ೧೪ | ೫ |
| ಗಲುಗಲುಗೆ | ಗಲುಗಲಿಗೆ | ೧೪ | ೬ |
| ಅತಾರ | ಅವತಾರ | ೧೯ | ೧೧ |
| ಚಾತುರ್ಮಾಸದ | ಚಾತುರ್ಮಾಸ್ಯದ | ೨೦ | ೧೬ |
| ತಂದೆಯುರು | ತಂದೆಯುವರು | ೨೧ | ೧೦ |
| ದಾರುಣದೆಗೆಳಿಳಿದು | ದಾರುಣದೆಸೆಗಿಳಿದು | ೪೭ | ೨೦ |
| ಮಾತಾಪಿತೃಗಳಾದ | ಮಾತಾಪಿತೃಗಳಾದ | ೫೩ | ೧೬ |
| ಸಂಶವು | ಸಂಶಯುವು | ೬೦ | ೮ |
| ಮುಟ್ಟಸಿಕೊಳ್ಳುವದಿಲ್ಲ | ಮುಟ್ಟಿಸಿಕೊಳ್ಳುವುದಿಲ್ಲ | ೬೨ | ೨ |
| ಸಾಮುಗ್ರಿ | ಸಾಮಗ್ರಿ | ೬೭ | ೧೯ |
| ಹಂಕಾರದ | ಅಹಂಕಾರದ | ೬೬ | ೯ |
| ಶಿಕ್ಪಣ | ಶಿಕ್ಷಣ | ೮೭ | ೫ |
| ವರದಕ್ಷಿಣೆಗೆ | ವರದಕ್ಷಿಣೆ | ೯೨ | ೨೫ |
| ಕೊನೆಣಿಸಿ | ಕೊನೆಗಣಿಸಿ | ೧೦೦ | ೧೧ |
| ಕೊಟ್ಟನು | ಕೊಟ್ಟಿನು | ೧೦೧ | ೮ |
| ನನ್ನ | ನನ್ನ | ೧೦೨ | ೨೧ |
| ಉದಾಹರಣೆಗಳಿನ್ನೆಷ್ಟು | ಉದಾಹರಣೆಗಳನ್ನೆಷ್ಟು | ೧೦೩ | ೬ |
| ವಿಷಯುನ್ನು | ವಿಷಯುವನ್ನು | ೧೦೬ | ೧೯ |
| ಬಿಡುವಿನಲ್ಲ. | ಬಿಡುವಿನಲ್ಲಿ | ೧೧೨ | ೨೨ |
| ಷಷ್ಠ್ಯಬ್ಧಿ | ಷಷ್ಟ್ಯಬ್ದ | ೧೨೬ | ೫ |

# ಶಬ್ದಾರ್ಥ.

ಅಗ್ಗಿ–ಅಗ್ನಿ
ಅಗ್ರೋದಕ–ದೇವರ ಅಭಿಷೇಕದ ನೀರು
ಅಂಕನ–ತಪ್ತಮುದ್ರೆಯ ಚಿಹ್ನ
ಅಂಚೆದೇರ–ಹಂಸವಾಹನ, ಬ್ರಹ್ಮ
ಅಂತೇವಾಸಿನ್–ವಿದ್ಯಾರ್ಥಿ
ಅಧ್ವರ–ಯಜ್ಞ
ಅರುಣ–ನೀರಿನ ಅಭಿಮಾನಿ ದೇವತೆ
ಅಲರು–ಅರಳು
ಅಲಸಿಕೆ–ಆಲಸ್ಯ
ಅಸಾಧಾರಣ ಧರ್ಮ–ಬೇರೆಡೆಯಲ್ಲಿಲ್ಲದ ಕುರುಹು
ಆಗಿಯಹಬ್ಬ–ವೈಶಾಖ ಹುಣ್ಣಿವೆಯ ಹಬ್ಬ
ಆಷಾಢಪೇಟೆ–ಅತ್ತೆಯ ಮನೆಯವರು ಸೊಸೆಗೆ ಆಷಾಢದಲ್ಲಿ ಕಳುಹುವ ಕಾಣಿಕೆ.
ಎದುರುಗೊಳ್ಳು–ಮದುವೆಯ ಪೂರ್ವದಲ್ಲಿ ಬೀಗಬೀಗರು ಭೆಟ್ಟಿಯಾಗಿ ವರಪೂಜೆ ಮಾಡುವ ಸಮಾರಂಭ.
ಓದು–ವೇದ
ಕದಪು–ಗಲ್ಲ
ಕಮ್ಮಟ–ಕೆಲಸಮಾಡುವ ಸಾಲೆ
ಕಾಕತಾಲೀಯವಾಗಿ–ಅಕಸ್ಮಾತ್ತಾಗಿ
ಕುಪ್ಪಸ–ಬಸಿರು ಹೆಂಗಸಿಗೆ ಊಟ ಹಾಕಿ ಕೊಡುವ ಕುಪ್ಪಸದ ಸಮಾರಂಭ
ಕೆಂಬೊಗರು–ಕೆಂಪು ಕಾಂತಿ
ಕೊಟ್ಟಗೆ–ಕೋಟೆಯ ಕೋಣೆ
ಗೊಂದಣಿ–ಸಮೂಹ
ಗೋಃಸಾಸ್ನಾದಿಮತ್ತ್ವ–ಆಕಳಿಗೆ ಗಂಗೆದೊಗಲಿರುವುದು.
ಘೋಟಕ–ಕುದುರೆ
ಡೆಂಕಣಿ–ಪತಾಕೆ ಹಚ್ಚುವ ಕಂಬ
ತಾರ್ಕ್ಷ್ಯ–ಕುದುರೆ

ತ್ರಿರಾತ್ರ–ಮೂರು ರಾತ್ರಿಯ ಅಶೌಚ
ತೊಟ್ಟಿಲು ಬಟ್ಟಲ–ತವರು ಮನೆಯವರು ಮೊದಲು ಹುಟ್ಟಿದ ಮಗಳ ಕೂಸಿಗೆ ಕೊಡುವ ಕಾಣಿಕೆ.
ತೊಂಡ–ನಮ್ರಸೇವಕ
ತೋರೆವಲ್ಲು–ಎದ್ದು ಕಾಣುವ ಹಲ್ಲು
ಥಟ್ಟು–ಗುಂಪು
ದಾಂಗುಡಿವಿಡಿ–ಎಲೆ ಬಿಟ್ಟು ಬೆಳೆ
ದ್ವಿದಲವ್ರತ, ಬೇಳೆಯಾಗುವ ಕಾಳು ಬಿಡುವ ವ್ರತ
ದೊರೆ, ಸರಿ
ಧಾವಳಿ, ಬಿಳಿ ಉಣ್ಣೆಯ ಉಡುವ ಕಂಬಳಿ
ನವಿರು, ಕೂದಲು
ನೆರೆ, ಮಹಾಪೂರ, ಸಮೀಪ
ಪಡಿವಳ, ದ್ವಾರಪಾಲಕ
ಪಮುಳು, ಪ್ರೀತಿ
ಪಯಸ್ಸು, ಹಾಲು, ನೀರು
ಪಕ್ಷಿಣಿ, ಒಂದೂವರೆ ದಿವಸದ ಅಶೌಚ
ಪ್ರತೀಕ, ಮೂರ್ತಿ
ಪಾತ, ಬಸಿರಾಗಿ ೫–೬ ತಿಂಗಳಲ್ಲಿ ಆಗುವ ಗರ್ಭನಾಶ
ಪುದುವಾಗು, ಪ್ರೀತಿಯಿಂದಿರು
ಪುಣ್ಯಾಹವಾಚನ, ವ್ರತಸಂಸ್ಕಾರಗಳನ್ನು ಕೈಕೊಂಬುವ ಮುಂಚಿತ ಗಣಪತಿ ಪೂಜೆಮಾಡುವುದು.
ಪೊಂಬಸಿರ, ಹಿರಣ್ಯಗರ್ಭ, ಬ್ರಹ್ಮ
ಪ್ರವಣಂ ಕುರು, ನಮ್ರಮಾಡು
ಬಳಿವಳಿ, ಉಡುಗೊರೆಯ ಸಂಗಡ ಕೊಡುವ ಕಾಣಿಕೆ
ಬಂಧುತ್ರಯ, ತನ್ನ, ತನ್ನ ತಂದೆ ತಾಯಂದಿರ ಪರಗೋತ್ರದೊಳಗಿನ ಸಮೀಪದ ಸಂಬಂಧಿಕರು
ಬಿತ್ತು, ಬೀಜ

ಬಿಸಿಲೂಟ, ಮದುವೆಗೆ ಕರೆದುತರುವ ಮುಂದೆ ವರನಿಗೆ ಕೊಡುವ ಊಟದ ಕಾಣಿಕೆ
ಭೋರಜಗುಲಿ, ವಧೂವರರನ್ನು ಮಂತ್ರಾಕ್ಷತೆಗಾಗಿ ಕೂಡ್ರಿಸುವ ಜಗುಲಿ
ಭ್ರೂಣಹತ್ಯೆ-ಶಿಶುಹತ್ಯೆ, ಗರ್ಭನಾಶ ಮಾಡುವುದು.
ಮದ್ದು-ಔಷಧ
ಮರುಕ-ಪ್ರೀತಿ
ಮಾಮನೆ-ವಧುವನ್ನು ಮನೆದುಂಬಿಸಿ ಕೊಂಡ ಬಳಿಕ ಅತ್ತೆಯ ಮನೆಯವರು ಹಾಕುವ ಊಟ
ಮೇಲುಮು-ದಿನದ ಸೀರೆಗಿಂತ ಹೆಚ್ಚಿನ ಬೆಲೆಯ ಸೀರೆ (ಲಗ್ನದಲ್ಲಿ ಮೈಮೇಲೆ ಹೊದಿಸುವುದು) ಮೇಲ್ದಿ
ಯದೃಚ್ಛಾ-ಅಕಸ್ಮಾತ್
ರಾಯಪ್ಪನಾಯಕರ ಫಲಾಹಾರ-ನೀರು
ರುಕ್ಕೋತ-ಮದುವೆಯ ಹಿಂದಿನ ದಿನ ರಾತ್ರಿ ಹೆಣ್ಣಿನವರು ಪರಪಕ್ಷದವರಿಗೆ ಹಾಕುವ ಭೂಮದ ಊಟ
ರೂಪ್ಯಕ-ರೂಪಾಯಿ
ವಂಗಡ-ಗುಂಪು
ವಂಶ-ಬಿದಿರು, ಕುಟುಂಬ
ವಾಮಕುಕ್ಷಿ-ಅಪ್ಪಾಗು ಮಲಗು
ವಾಜಿ-ಕುದುರೆ
ವಾರಕರಿ-ಪಂಢರಪುರಕ್ಕೆ ಹೋಗುವ ವ್ರತಹಿಡಿದ ಭಕ್ತ
ವಾರುವ-ಕುದುರೆ
ವಾಹ-ಕುದುರೆ
ಶಾಕವ್ರತ=ಪಲ್ಲೆ ಬಿಡುವ ವ್ರತ
ಶ್ರಾವಣಸೇಟಿ-ವಧೂಪಕ್ಷದವರು ಶ್ರಾವಣದಲ್ಲಿ ವರನಿಗೆ ಕೊಡುವ ಕಾಣಿಕೆ
ಶುಭ್ರ-ರೂಪಾಯಿ
ಸಜ್ಯೋತಿ-ಒಂದೊಪ್ಪತ್ತಿನ ಅಶೌಚ
ಸಟ್ಟ್ಯ-...
ಸಪ್ತಿ-ಕುದುರೆ
ಸಪಿಂಡ—ಹತ್ತು ದಿವಸ ಜನನಮರಣಾಶೌಚ ಮಾಡತಕ್ಕವರು
ಸಮಾನೋದಕ-ಮೂರು ದಿವಸದ ಅಶೌಚವುಳ್ಳವರು
ಸವ್ಯಸಾಚಿ-ಶಕ್ತಿಯಲ್ಲಿ ಎಡಗೈಯೂ ಬಲಗೈಯಂತೆ ಬಲವಾಗಿರುವುದು
ಸರ್ಷಪ-ಸಾಸಿವೆ
ಸಾಧನೆ-ನಿರ್ದಿಷ್ಟ ವೇಳೆಯಲ್ಲಿಯೆ ಸಾಧಿಸಿ ದ್ವಾದಶಿಯ ಪಾರಣೆ ಮಾಡುವುದು
ಸಾಡೆ—ಮದುವೆ ಮುಗಿಸಿ ಮಗಳನ್ನು ಅತ್ತೆಗೆ ಒಪ್ಪಿಸುವ ಸಮಾರಂಭ
ಸ್ರಾವ-ಗರ್ಭಧಾರಣವಾಗಿ ೪ ತಿಂಗಳಲ್ಲಿ ಆಗುವ ಗರ್ಭನಾಶ
ಸೀಮಂತೋನ್ನಯನ, ಬಸಿರು ಹೆಂಗಸಿಗೆ ಮಾಡುವ ಒಂದು ಸಂಸ್ಕಾರದ ಸಮಾರಂಭ
ಸೂತಉವಾಚ — ಪ್ರಾರಂಭ
ಸೇಸೆದಳೆ—ಮಂತ್ರಾಕ್ಷತೆ ಹಾಕು
ಸಂಪುಷ್ಟ-ದೇವರನ್ನು ಹಾಕುವ ತಾಮ್ರ ಹಿತ್ತಾಳಿ ಬೆಳ್ಳಿಯ ಡಬ್ಬಿ
ಸ್ನಾತಕ ವಿಧಿ-ಬ್ರಹ್ಮಚರ್ಯದ ಆಶ್ರಮ ಮುಗಿದ ಬಳಿಕ ಮಾಡುವ ಸ್ನಾನವಿಧಿ
ಹರಣ -- ಪ್ರಾಣ
ಹರಿವಾಸರ-ನಿರ್ದಿಷ್ಟ ಕಾಲ ತೀರಿದಬಳಿಕ ದ್ವಾದಶಿಯ ದಿವಸ ಪಾರಣೆ ಮಾಡುವುದು
ಹಲ್ಲಣ—ಲಗಾಮು
ಹಳುವು—ಅರಣ್ಯ
ಹೂಬತ್ತಿ—ತುಪ್ಪ ಹಾಕಿ ಉರಿಯುವಂತೆ ನೀರಾಂಜನದಲ್ಲಿಡುವ ಬತ್ತಿ
ಷಷ್ಟ್ಯಬ್ದಪೂರ್ತಿ-೬೦ ವರ್ಷ ತುಂಬಿದ ಕೂಡಲೆ ಪ್ರಾಯಶ್ಚಿತ್ತ ತೆಗೆದು ಕೊಳ್ಳುವ ವಿಧಿ

ಪುಸ್ತಕ ದೊರೆಯುವ ಸ್ಥಳ—

ಕಥಾಕುಂಜ ಗ್ರಂಥಭಾಂಡಾರ, ಬೆಳಗಾವಿ.

---

ಪ್ರಸ್ತುತ ಗ್ರಂಥಕರ್ತರಿಂದ ರಚಿತವಾದ

'ಕವಿಕನಕದಾಸರು'

ಬೆಲೆ ೧—೪—೦

---

ಪ್ರಕಾಶಕರು—ಕಟ್ಟಿ ಶೇಷಾಚಾರ್ಯರು, ಬಿ.ಎ. ಎಲ್ಎಲ್. ಬಿ. ಬೆಳಗಾವಿ.

ಮುದ್ರಕರು—ಭೀಮರಾವ ಅಣ್ಣಾರಾವ ಚೌಗುಲೆ ಶ್ರೀಮಹಾವೀರ ಮುದ್ರಣಾಲಯ ಬೆಳಗಾವಿ.